# brown book

**THE BOOK WAS DRENCHED**

ಕಲಿಯುಗ ವಿಜ್ಞಾನಮಾಲೆ ೭

# ಸ್ವರತಿ

ಮುಷ್ಟಿಮೈಥುನದ ಕಾರಣ ಪರಿಣಾಮ ಚಿಕಿತ್ಸೆ

✲

ಬರೆದವರು:

ಡಾ. ಗೋಪಾಲಕೃಷ್ಣರಾಯರು

✲



೨ನೆಯ ಆವೃತ್ತಿ

ಮಾರ್ಚ ೧೯೪೪ ]  [ ಬೆಲೆ ೧-೮-೦

ಕೈಯನ್ನಿಟ್ಟುಕೊಳ್ಳುವುದೇ ಸೈ. ವಸ್ತುತಃ ಅವರ ಆ ನಟನೆಯನ್ನು ಕೂಡ ಯಶಸ್ವಿಯಾಗಿ ಸಾಧಿಸುವ ಶಕ್ತಿಯು ಕಾಮಮೂಲವಾಗಿದೆ ಎಂಬುದು ಆ ವೇಷಧಾರಿಗಳಿಗೆ ತಿಳಿಯದು. ಏಕೆಂದರೆ ಜಗತ್ತಿನ ಎಲ್ಲ ಕಲಾಕೌಶಲ್ಯಗಳೂ ಕಾಮವೃತ್ತಿಯ ಕುಸುಮಗಳಾಗಿವೆಯೆಂದು ವಿಚಾರಿಗಳು ಸಿದ್ಧಾಂತಿಸಿದ್ದಾರೆ.

ಆದರೆ ಶಾಶ್ವತ ನಿಯಮಗಳನ್ನು ಆಧರಿಸಿ ನಡೆವ ವಿಶ್ವದ ಆಗು ಹೋಗುಗಳು ವೇಷಧಾರಿಗಳ ಗೊಡ್ಡು ಹರಟೆಗಳನ್ನವಲಂಬಿಸಿರುವದಿಲ್ಲ. ಕಾಮವು ಕುತ್ಸಿತ, ಪಾಪಕರವೆಂದು ಸುಳ್ಳು ಧರ್ಮವೂ ಪೊಳ್ಳು ಸಾಂಪಿತ್ರ್ಯವೂ ಎಷ್ಟು ಚೀರಾಡಿದರೂ ಮನುಷ್ಯನ ಜೀವನದ ಮರ್ಮವೆ ಕಾಮದಿಂದ ಸುತ್ತಲ್ಪಟ್ಟಿದೆಯೆಂದು ವಿಜ್ಞಾನಸೃಷ್ಟಿಗೆ ಇಂದು ಮನವರಿಕೆಯಾಗಿದೆ. ಮತ್ತು ನಿಸರ್ಗವು ಕೂಡ ಮನುಷ್ಯ ನಿರ್ಮಿತವಾದ ರಾಜ್ಯ, ಧರ್ಮ, ಕಲಾ, ಸಾಹಿತ್ಯ, ದ್ರವ್ಯ, ವ್ಯವಸಾಯಗಳಿಗಿಂತ ಕಾಮಕ್ಕೇ ಹೆಚ್ಚಿನ ಮಹತ್ವವನ್ನು ಕೊಡುತ್ತದೆ ಎಂಬುದು ತಿಳಿಗಣ್ಣಿಗೆ ಹೊಳೆಯುತ್ತದೆ.

ಈ ಮಾತಿಗೆ ತೀರ ಸ್ಪಷ್ಟವಾದ ಪ್ರಮಾಣಗಳಿವೆ. ಚಕ್ರವರ್ತಿಗಳು ಸಾಮ್ರಾಜ್ಯವನ್ನು ಕಳೆದುಕೊಳ್ಳುತ್ತಾರೆ ಆದರೂ ಎಂದಾದರೂ ಅದನ್ನು ಪುನಃ ಕಟ್ಟಿಕೊಳ್ಳುವ ನಂಬಿಗೆಯನ್ನು ಇಟ್ಟುಕೊಂಡು ಅಡವಿಯಲ್ಲಿ ಸುಖವಾಗಿ ನಿದ್ರಿಸುತ್ತಾರೆ. ಜಾತಿಯಿಂದ ಬಹಿಷ್ಕೃತರಾಗಿ ಕುಲಗೆಟ್ಟವರಿದ್ದಾರೆ. ಆದರೂ ಅವರು ಇದ್ದ ಕುಲದಲ್ಲಿಯೆ ಮಡಿದು ಉಂಡು ಮೈಮರೆಯುತ್ತಾರೆ. ಇಂದು ಲಕ್ಷಾಧೀಶರಾಗಿದ್ದವರು ಬಾಂಬುಗಳ ದಾಳಿಗೆ ತುತ್ತಾಗಿ ಮನೆಮಾರುಗಳನ್ನು ಕಳೆದುಕೊಂಡು ನಾಳೆ ಭಿಕ್ಷಾಪಾತ್ರೆಯನ್ನು ಕೈಕೊಂಡವರಿದ್ದಾರೆ. ಆದರೂ ಅವು ತಮ್ಮ ಹಣೆಬರಹವೆಂದು ಹೊಗೆಯಲ್ಲಿಯೆ ನಗೆಸೂಸಿ ಬಾಳುತ್ತಾರೆ. ಇಂದು ಸಮಾಜದಲ್ಲಿ ಗಣ್ಯ ಮಾನ್ಯವಾದ ಸ್ಥಾನದಲ್ಲಿದ್ದು, ನಾಳೆ ತಮ್ಮ ದುಷ್ಕೃತ್ಯಗಳಿಂದಲೋ ಸುಳ್ಳು ಆರೋಪಗಳಿಂದಲೋ ಹೆಸರುಗೆಟ್ಟು ಮುಖಹೀನರಾಗಿ ಹೋಗುವವರಿದ್ದಾರೆ. ಅವರು ಕೂಡ ಭವಿಷ್ಯ ಗರ್ಭದಲ್ಲಿಯ ಒಂದು ಸುದಿನವನ್ನು ಧ್ಯಾನಿಸುತ್ತ ಸವಿಗನಸಿನಲ್ಲಿ ಕಾಲಕಳೆಯುತ್ತಾರೆ. ಇಷ್ಟೆಲ್ಲ ಕಷ್ಟ ನಷ್ಟಗಳನ್ನು ಸಹಿಸುವ ಧೀರರನ್ನು ಬೆದರಿಸಬೇಕಾದರೆ ಒಂದೇ ಒಂದು ನಿಶ್ಚಿತವಾದ ದಾರಿಯಿದೆ. "ನಿಮ್ಮ

ಮುಖದಲ್ಲಿ ಏಕೋ ನಪುಂಸಕರ ಕಳೆ ತೊಡೆಯುತ್ತಿದೆ" ಎಂಬ ಒಂದೇ ವಾಕ್ಯವನ್ನು ಅವರಿಗೆ ತುಸು ಗಂಭೀರವಾಗಿ ಹೇಳಿ ನೋಡಿ. ಅವರ ಮೊಗವು ಒಮ್ಮೆಲೆ ಬಿಳಿಚಿಕೊಳ್ಳಬಹುದು ಮಿಕ್ಕ ಸುಖ ಸೌಭಾಗ್ಯಗಳಿಷ್ಟಿದ್ದರೂ ಕಾಮನಾಶವಾದ ಕ್ಷಣದಿಂದಲೆ ಅವರಿಗೆ ಜೀವನವೆ ಶೂನ್ಯವೆನಿಸುವದು. ಬೇರೆ ವಿಧದಿಂದ ದುಃಖಿತರಾದವರನ್ನು ಸವಿನುಡಿ, ಶಾಂತಿವಚನಗಳಿಂದ ಸಂತೈಸಬಹುದು ಆದರೆ ಕಾಮವನ್ನು ಕಳೆದುಕೊಂಡವರಿಗೆ ಶಾಂತಿಯಿಲ್ಲ. ಒಂದೊಂದು ಸಲ ಕಲವು ಕಾರಣಗಳ ಮೂಲಕ ಸಂಭೋಗ ಸಮಯದಲ್ಲಿ ಲಿಂಗವು ಉದ್ರೇಕಗೊಳ್ಳುವದಿಲ್ಲ. ವೇಶ್ಯೆಯಲ್ಲಿ ಅಥವಾ ಕುಲಟೆಯಲ್ಲಿ ಸಮಾಗಮಿಸಲು ಹೋದಾಗ ಉದ್ರೇಕವಾಗದ್ದನ್ನು ಕಂಡು ಗಾಬರಿಯಿಂದ ಆತ್ಮಹತ್ಯೆ ಮಾಡಿಕೊಂಡವರ ಉದಾಹರಣೆಗಳೂ ಇವೆ ಅದೇ ಗಾಬರಿಯಿಂದ ಶಾಶ್ವತವಾಗಿ ನಪುಂಸಕರಾದವರಿದ್ದಾರೆ. ಕಾಮತೃಪ್ತಿಯಿಲ್ಲದ ಅಥವಾ ರತಿಯ ಪ್ರವೃತ್ತಿಯಿಲ್ಲದಿರುವಾಗ ಒತ್ತಾಯದ ಸಂಭೋಗಕ್ಕೆ ಬಲಿಬಿದ್ದ ತರುಣಿಯರು ಭೂತೋನ್ಮಾದಗಳಿಂದ ಬಳಲಿದ್ದಾರೆ. ಸಾರಾಂಶ, ಮನುಷ್ಯನು ಸುಳ್ಳು ಧರ್ಮದ ಹುಚ್ಚಿನಲ್ಲಿ ಏನೇ ಹರಟಲಿ, ಕಾಮವೃತ್ತಿಯು ಹ್ಯಾವ್‌ಲೋಕ್ ಎಲಿಸ್ ಹೇಳಿದ ಹಾಗೆ ಜೀವನದ ಅಣುರೇಣುಗಳಲ್ಲಿಯೂ ಹುದುಗಿಕೊಂಡಿದೆ—ಜೀವನವೆ ಕಾಮಮೂಲವಾಗಿದೆ. ಅದನ್ನು ಅಮುಖ್ಯವೆಂದು ಅಲ್ಲಗಳೆದರೆ ಜೀವನವೆ ಗಂಡಾಂತರಕ್ಕೀಡಾಗುವದು. ಮತ್ತೆ ಈ ಸತ್ಯವು ಕಾಮೋದಯವನ್ನು ಹೊಂದಿರುವ ಪ್ರತಿ ವ್ಯಕ್ತಿಗೂ ತಿಳಿದಿದೆ, ಮತ್ತು ವೇಷಧಾರಿ ಧಾರ್ಮಿಕರಿಗೂ ಗೊತ್ತಿದೆ ಸಂಸಾರ ಸುಖವನ್ನುಂಡ ದಂಪತಿಗಳಷ್ಟೆ ಕಾಮಕ್ಷಯದಿಂದ ದಿಗಿಲುಗೊಳ್ಳುವದಿಲ್ಲ; ಮದುವೆಯಾಗದ ತರುಣ ತರುಣಿಯರು ಕೂಡ ತಮ್ಮ ಕಾಮ-ವೃತ್ತಿಯ ನೆಲೆ ನಡುಗುತ್ತಿದೆಯೆಂದು ಗಾಬರಿಗೊಂಡು ನಿರರ್ಥಕವಾಗಿ ಚಡಪಡಿಸುವವರಿದ್ದಾರೆ.

ಈ ಮಾತಿಗೆ ಇನ್ನೊಂದು ದೊಡ್ಡ ಪ್ರಮಾಣವೆಂದರೆ ಕಾಮವಿಜ್ಞಾನಿಗಳಿಗೆ ರೋಗಿಗಳಿಂದ ಬರುತ್ತಿರುವ ಪತ್ರಗಳಾಗಿವೆ. ನಮಗೆ ಪ್ರತಿವರ್ಷ ಬರುತ್ತಿರುವ ಸಾವಿರಾರು ಪತ್ರಗಳಲ್ಲಿ ತಮ್ಮ ಕಾಮಶಕ್ತಿಯು ತತ್ತರಿಸುತ್ತಿದೆಯೆಂದು ಅಂಜಿದವರ ಪತ್ರಗಳೆ ಹೆಚ್ಚಾಗಿರುತ್ತವೆ. ಮತ್ತು ಬಹುತರ

ವಾಗಿ ಎಲ್ಲರೂ ತಮ್ಮ ತೊಂದರೆಗಳಿಗೆಲ್ಲ ಒಂದು ಕಾಲಕ್ಕೆ ತಾವು ಅಭ್ಯಸಿಸಿದ
ಮುಷ್ಟಿ ಮೈಥುನವೆ ಕಾರಣವೆಂದು ನಿರ್ಧರಿಸಿಕೊಂಡಿದ್ದಾರೆ. ಆ ಪತ್ರಗಳನ್ನು
ಸಹಾನುಭೂತಿಯಿಂದ ಓದುವ ಯಾರಿಗಾದರೂ ಮುಷ್ಟಿ ಮೈಥುನದ ದುಷ್ಪರಿ
ಣಾಮದ ಅಂಜಿಕೆಯು, ಜಗತ್ತಿನ ಮಿಕ್ಕೆಲ್ಲ ಬೇನೆಗಳಿಗಿಂತ ಹೆಚ್ಚು ಭಯಂಕರ
ವಾಗಿ ಯುವಕ ಯುವತಿಯರನ್ನು ಕಾಡುತ್ತಿದೆಯೆಂದು ಮನವರಿಕೆಯಾಗ
ದಿರದು. ಅದರ ಅಂಜಿಕೆಯಿಂದ ಹಗಲಿರುಳು ಚಡಪಡಿಸುವ ಮೊದಲು
ಗೊಂಡು ಆತ್ಮಹತ್ಯವನ್ನೆ ಮಾಡಿಕೊಳ್ಳುವವರಿಗೆ ಮನಸ್ಸು ಉದ್ವಿಗ್ನವಾಗು
ತ್ತಿದ್ದುದು ಸ್ಪಷ್ಟವಾಗುವದು. ಮಾದರಿಗಾಗಿ ಇಲ್ಲಿ ಒಂದು ಪತ್ರವನ್ನು
ಪ್ರಸಿದ್ಧಿಸುತ್ತೇವೆ :—

"ನನ್ನ ವಯಸ್ಸು ೧೭ ವರುಷ. ಕಳೆದ ನಾಲ್ಕು ವರ್ಷಗಳಿಂದ ನನಗೆ
ಮುಷ್ಟಿ ಮೈಥುನದ ಚಟ ಬಿದ್ದಿದೆ. ಮೊದಮೊದಲು ದಿನಕ್ಕೆ ಅನೇಕ ಸಲ
ಅದನ್ನು ಮಾಡಿಕೊಳ್ಳುತ್ತಿದ್ದೆ ಆಗ ಅದರಿಂದ ಏನೂ ಅನಿಸಲಿಲ್ಲ. ಆದರೆ
ಮುಂದೆ ಒಂದೆರಡು ವರ್ಷಗಳ ಮೇಲೆ ಹೃದಯದ ಮೇಲೆ ಕೆಟ್ಟ ಪರಿಣಾಮ
ವೆಸಿಸಿತು. ಬೆನ್ನಿನಲ್ಲಿ ಎದೆಯಲ್ಲಿ ನೋವು ಸುರುವಾಗಿದೆ. ಶೌಚಕ್ಕೆ ಸ್ವಚ್ಛ
ವಾಗಿ ಆಗುವದಿಲ್ಲ. ಇನ್ನೊಂದು ಸಲ ಮೈಥುನ ಮಾಡಿಕೊಳ್ಳುವದಿಲ್ಲವೆಂದು
ಆಣೆಯಿಟ್ಟುಕೊಂಡೆ. ಆದರೂ ವಾರಕ್ಕೊಮ್ಮೆಯಾದರೂ ಮಾಡಿಕೊಂಡೇ
ಬಿಡುವೆನು. ಅದರಿಂದಾಗುವ ದುಷ್ಪರಿಣಾಮವು ತಿಳಿದಿದ್ದರೂ ನನಗೆ ತಿಳಿ
ಯದೆ ಮಾಡಿಕೊಂಡುಬಿಡುತ್ತೇನೆ. ಹಿಂದುಗಡೆ ಬಹಳ ಮರುಗುವೆನು.
ನಮ್ಮ ಶಾಲೆಯಲ್ಲಿಯ ಒಂದು ಹುಡುಗಿಯ ಬಗ್ಗೆ ಯಾವಾಗಲೂ ಏನು
ಮಾಡಿದರೂ ಮೋಹವು ಬಿಡಲೊಲ್ಲದು. ಆಕೆ ಮನದ ಮುಂದೆ ಬಂದ
ಕೂಡಲೆ ಮುಷ್ಟಿ ಮೈಥುನದ ಪ್ರವೃತ್ತಿಯು ತಡೆಯದಂತೆ ಆಗುವದು.
ಮಾಡಿಕೊಂಡ ಮೇಲೆ ಪಕ್ಕೆಯಲ್ಲಿ ನೋವು ಸುರುವಾಗುತ್ತದೆ. ಇದರ
ಮೂಲಕವೋ ಏನೋ ನನ್ನ ಲಿಂಗವು ಸ್ವಲ್ಪ ಮಣಿದಿದೆ. ಅದರ ಮೇಲೆ
ಸಣ್ಣ ಗುಳ್ಳೆಗಳು ಕಾಣುತ್ತಿವೆ.......... ನಾನು ಪಾಪಿ. ಚಟದಲ್ಲಿ ಬಹಳ
ಆಳವಾಗಿ ಹೋಗಿದ್ದೇನೆ. ಮೊನ್ನೆ ಒಂದು ಪುಸ್ತಕದಲ್ಲಿ ಓದಿದೆ, ಮುಷ್ಟಿ
ಮೈಥುನದಿಂದ ಅಕಾಲ ಮೃತ್ಯುವುಂಟಾಗುತ್ತದೆಂದು. ಅದಕ್ಕಾಗಿ ಬಹಳ ಹೆದ
ರಿದ್ದೇನೆ. ನನ್ನ ವೀರ್ಯವು ಎಷ್ಟು ಹಾಳಾಗಿ ಹೋಯಿತಲ್ಲ! ಎಂದು ಬಹಳ

ದುಃಖವಾಗುತ್ತದೆ. ಅದನ್ನೆಲ್ಲ ತಿರುಗಿ ಗಳಿಸಲು ಸಾಧ್ಯವೇ? ನನಗೆ ಈ ಚಟದಿಂದ ಮುಕ್ತನಾಗಲು ದಾರಿ ತೋರಿಸಿ ಕೊಡುವಿರಾದರೆ ಜನ್ಮಾಂತರದಲ್ಲಿಯೂ ಕೃತಜ್ಞನಾಗಿರುವೆನು. ಇಲ್ಲದಿದ್ದರೆ ನಾನು ಹೀಗೇ ಬೇಗನೆ ಒಂದು ದಿನ ಭೂಮಿಗೆ ಬಿದ್ದು ಹೋಗುವೆನು!"

ಮೇಲಿನಂತಹ ಭಾವನೆಗಳಿಂದ ಪರಿತಪಿಸುತ್ತಿರುವ ಸಾವಿರಾರು ಯುವಕ ಯುವತಿಯರು ನಮ್ಮ ಸಮಾಜದಲ್ಲಿದ್ದಾರೆ. ವೇಷಧಾರಿ ಧಾರ್ಮಿಕರು ಹೇಳುವಂತೆ ಕಾಮವು ಅಮುಖ್ಯವಾಗಿದ್ದರೆ ಪಾಪವೃತ್ತಿಯಾಗಿದ್ದರೆ ಜೀವನ ಪ್ರಯಾಣದಲ್ಲಿ ಕಾಮವು ಒಂದು ಹೊರಲಾಗದ ಕೊರಳ ಗುದ್ದಿಯಾಗಿದ್ದರೆ ಕಾಮಾಂಗಗಳಲ್ಲಿಯ ಅವ್ಯವಸ್ಥೆಯಿಂದ ಸ್ತ್ರೀಪುರುಷರು ಇಷ್ಟೇಕೆ ಬೆದರಬೇಕು? ಇಷ್ಟೇಕೆ ನಿರಾಶರಾಗಬೇಕು? ಕಾಮಾಂಗಗಳ ಭದ್ರತೆಗಾಗಿ ಇಷ್ಟೇಕೆ ಕಾತರಿಸಬೇಕು? ಹಲವು ಮಕ್ಕಳನ್ನು ಹುಟ್ಟಿಸಿ ಪ್ರಪಂಚದಿಂದ ನಿವೃತ್ತರಾಗುವ ವಯಸ್ಸಾದ ಮುದುಕರು ಕೂಡ ತಮ್ಮ ಪೌರುಷ ಕ್ಷಯದಿಂದ ದಿಗಿಲುಗೊಂಡು ಹುಚ್ಚರಂತಾಗುತ್ತಾರೆ. ಅದರ ಪುನರುಜ್ಜೀವನಕ್ಕಾಗಿ ಸಾಧ್ಯವಾದಷ್ಟು ಹಣವನ್ನು ವೆಚ್ಚಿಸುತ್ತಾರೆ. ಈ ಸಂಗತಿಗಳಿಂದ ಕಾಮದ ಅನಿವಾರ್ಯತೆಯು ವ್ಯಕ್ತವಾಗುತ್ತದೆ. **ಜೀವನವು ಕಾಮಮೂಲವಾಗಿದೆ; ಬಾಳಿನ ಏರಿಳುವುಗಳು ಕಾಮಮೂಲವಾಗಿವೆ.** ಶಾಸ್ತ್ರಿಗಳು ಬಾಯಿಂದ ಏನನ್ನೇ ಹೇಳಲಿ; ಶಾಸ್ತ್ರಗಳಲ್ಲಿ ಈ ಮಾತು ಸ್ಪಷ್ಟವಾಗಿದೆ. ಮತ್ತೆ ಪ್ರಾಮಾಣಿಕವಾದ ಬುದ್ಧಿಗೆ ಇದೇ ಸತ್ಯವು ಅನುಭವಕ್ಕೆ ಬರುತ್ತದೆ.

ಶಾಸ್ತ್ರ ಮತ್ತು ಅನುಭವಕ್ಕೆ ವಿರುದ್ಧವಾದ ಧ್ಯೇಯಾಚಾರಗಳಲ್ಲಿ ಮಗ್ನರಾದುದರಿಂದಲೆ ಜೀವನವು ತೊಡಕಿನದಾಗಿದೆ ಭಾರತೀಯ ಪುರಾತನರು ಕಾಮವನ್ನು ಮೋಕ್ಷ ಸಾಧನದ ಒಂದು ಮೆಟ್ಟಿಲೆಂದು ತಿಳಿದಿದ್ದರು. ಕಾಮದ ಅಭ್ಯಾಸ ಸಾಧನಗಳಿಗಾಗಿ ಗೃಹಸ್ಥಾಶ್ರಮವನ್ನು ಏರ್ಪಡಿಸಿದ್ದರು. ಆ ಆಶ್ರಮವನ್ನು ಪ್ರವೇಶಿಸುವ ಮೊದಲೇ ಮಿಕ್ಕ ಶಾಸ್ತ್ರಗಳಂತೆ ಕಾಮಶಾಸ್ತ್ರವನ್ನೂ ಅವರು ಅರಿತುಕೊಳ್ಳುತ್ತಿದ್ದರು. ಅವರ ಮಾರ್ಗದರ್ಶನಕ್ಕಾಗಿ ಅಸಂಖ್ಯ ಕಾಮವಿಜ್ಞಾನದ ಗ್ರಂಥಗಳು ಆಗ ಪ್ರಚುರವಾಗಿದ್ದವು ಆವುಗಳನ್ನು ಭಾರತದಲ್ಲಿ ಕ್ರಿಶ್ಚಿಯನ್ನರು ಕಾಲಿಡುವವರೆಗೆ ಯಾರೂ ಅಸಹ್ಯವೆಂದು ಕರೆಯಲಿಲ್ಲ. ಗೀತೆಯಲ್ಲಿ ಶ್ರೀಕೃಷ್ಣನು ಕೂಡ ತನ್ನನ್ನು "**ಧರ್ಮಾವಿರುದ್ಧಃ ಕಾಮಃ**"

(ಧರ್ಮ ಸಮ್ಮತವಾದ ಕಾಮ) ಎಂದು ಕರೆದುಕೊಂಡಿದ್ದಾನೆ. ಧರ್ಮಕ್ಕೆ ಒಪ್ಪಿದ ಕಾಮಕ್ಕೆ ಭಾರತೀಯ ಪರಂಪರೆಯು ಎಂದೂ ನಿಷೇಧವನ್ನು ಪ್ರಕಟಿಸಿಲ್ಲ. ಧರ್ಮವೆಂದರೆ ವೇಷಧಾರಿಗಳ ಅನುಕೂಲ ಸಿಂಧುವಲ್ಲ. ಧಾರಣೆ ಮಾಡುವುದೆ ಧರ್ಮ; **ದೇಹ ಮತ್ತು ಮನಸ್ಸಿನ ರೋಗ ಶೈಥಿಲ್ಯಗಳನ್ನು ತಡೆದು ಸ್ವಾಸ್ಥ್ಯ ಶಾಂತಿಗಳ ದಾರಿಯನ್ನು ತೋರುವುದೆ ಧರ್ಮ.** ದೇಹವನ್ನೂ ತೃಪ್ತಿಪಡಿಸಿ ಮನವನ್ನೂ ಉಲ್ಲಸಿತಗೊಳಿಸಿ ಶಕ್ತಿ, ಆರೋಗ್ಯಗಳನ್ನು ಬೆಳೆಯುವಂತೆ ಕಾಮವನ್ನು ಉಪಯೋಗಿಸುವುದೆ ಧರ್ಮಸಮ್ಮತವಾದ ದಾರಿ. ಆದ್ದರಿಂದ ಕಾಮವು ಕುತ್ಸಿತವೆಂದು ಅದರ ತೃಪ್ತಿ ಮತ್ತು ಸಮಂಜಸವಾದ ವಿಕಾಸಕ್ಕೆ ತಡೆಗಳನ್ನೊಡ್ಡುವವರೆ ಧರ್ಮಘಾತಕರು

ಆ ಧರ್ಮಘಾತಕರು ಕಾಮಜೀವನಕ್ಕೆ ಸಂಬಂಧಿಸಿದುದನ್ನೆಲ್ಲ ಭೀಕರವಾಗಿ ಅಶ್ಲೀಲವಾಗಿ ಚಿತ್ರಿಸುವದರಿಂದ ಯುವಕ ಯುವತಿಯರು "ಇತ್ತ ಕೆರೆ ಇತ್ತ ಬಾವಿ" ಎಂಬ ಅವಸ್ಥೆಯಲ್ಲಿ ಕೊರಗುವರು. ಒಂದು ಕಡೆ ನಿಸರ್ಗಜನ್ಯ ಕಾಮವು ಅಂಗಾಂಗಗಳಲ್ಲಿ ಹರಿದಾಡಿ ರಮ್ಯವಾದ ಚಟುವಟಿಕೆಗಳ ತಂಗಾಳಿಯನ್ನು ಬೀರುವದು. ಅದರ ಲಹರಿಯಲ್ಲಿ ಮನಬಂದಂತೆ ಹಾರಾಡುವೆನೆಂದರೆ ಇನ್ನೊಂದು ಕಡೆ "ಹಾಂ! ಅದು ಪಾಪ! ಅದು ನಿಮ್ಮನ್ನು ನರಕಕ್ಕೊಯ್ಯುವ ಪಿಶಾಚಿ! ಅದಕ್ಕೆ ಎಳ್ಳಷ್ಟೂ ಎಡೆಗೊಡದಿರಿ! ಕೂಡಲೆ ಅದನ್ನು ಬೇರುದೆಸೆಯಿಂದ ಉಚ್ಚಾಟನೆ ಮಾಡಿರಿ" ಎಂದು ಗರ್ಜಿಸುವ ಸ್ವನಿಯೋಜಿತ ಧರ್ಮಾಧಿಕಾರಿಗಳು (?) ಈ ಬಗೆಯ ಸಂಕಟದಲ್ಲಿ ತೊಳಲುತ್ತಿರುವ ಹರೆಯರಿಗೆ ಯಾವದು ಸರಿ ಯಾವದು ತಪ್ಪು ಎಂಬುದೊಂದು ಬಿಡಲಾರದ ಒಗಟವಾಗದಿರದು. ಭೂಮಿಯ ಮೇಲೆ ಬಿದ್ದ ಮೊದಲುಗೊಂಡು ಮಲ, ಮೂತ್ರ. ಊಟ, ಆಟಗಳಲ್ಲೆಲ್ಲ ಧರ್ಮದ ಮುದ್ರೆಯನ್ನೊತ್ತಿಸಿಕೊಂಡು ಬೆಳೆದ ತರುಣತರುಣಿಯರು ತಮ್ಮ ನಿಸರ್ಗದ ಮಧುರ ಸ್ವರವನ್ನು ಒತ್ತಿಕ್ಕಿ ಆ ಸುಳ್ಳು ಧಾರ್ಮಿಕರ ಬೆದರಿಕೆಗೇ ಸೊಪ್ಪು ಹಾಕುವದು ಸಹಜವಾಗಿದೆ. ಪರಿಣಾಮದಲ್ಲಿ "ಬಗೆಯೆಣಿಪ ದೆಸೆಯೊಂದು ಜಗದೋರ್ಪ ದಿಸೆಯೊಂದು" ಎಂಬಂತೆ ಮನವು ಬಯಸುವುದೊಂದು, ಮೈ ಮಾಡುವುದೊಂದು. ಮೈ ಮನಗಳ ಗೆಳೆತನ ತಪ್ಪಿತೆಂದರೆ ನಿಸರ್ಗ ಮತ್ತು ಮಿಥ್ಯಾಧರ್ಮಗಳ ಕೈಯಲ್ಲಿ ಸಿಕ್ಕು ಅತೋಭ್ರಷ್ಟಃ ತತೋ ಭ್ರಷ್ಟಃ ಎಂಬ ಅವಸ್ಥೆಯುಂಟಾಗುವದು.

"ಅಯ್ಯೋ ಮುಷ್ಟಿ ಮೈಥುನ ಮಾಡಿಕೊಳ್ಳುವಾಗ ಸ್ವರ್ಗೀಯ ಸುಖವಾಗುವದು. ಅಂಥ ಸ್ವರ್ಗಸುಖದಾಯಕವಾದ ಪ್ರವೃತ್ತಿಯು ಪಾಪ ಪೂರಿತವಾಗಿರುವದು. ಪಾಪಪೂರಿತವೆಂದು ತಿಳಿದರೂ, ಸಾವಿರ ಸಲ ಪ್ರತಿಜ್ಞೆ ಮಾಡಿದರೂ, ಅನೇಕ ಭಯಂಕರ ದುಷ್ಪರಿಣಾಮಗಳುಂಟಾಗಿದ್ದರೂ ಸೆರೆ ಕುಡಿದವರಂತೆ ದೆವ್ವ ಹೊಕ್ಕವರಂತೆ ಆ ಕ್ಷಣಿಕ ಸ್ವರ್ಗ ಸುಖಕ್ಕೆ ಮನಸ್ಸು ಹಂಬಲಿಸುವದಲ್ಲ! ಇಷ್ಟು ಸುಖದಾಯಕವಾದದ್ದನ್ನು ಪಾಪವೆಂದು ಯಾಕೆ ಮಾಡಿದರು? ಇಷ್ಟು ಪಾಪಕರವಾದದ್ದನ್ನು ದೇವರು ಯಾಕೆ ಹುಟ್ಟಿಸಿದನು! ಮನುಷ್ಯನು ತನ್ನ ಕೈಯಿಂದಲೆ ತನ್ನ ಗೋರಿಯನ್ನು ತೋಡಿಕೊಳ್ಳಲೆಂದೇ? ಆಗಲಿ, ಈ ಜನ್ಮದಲ್ಲಿಯಂತೂ ನನ್ನಿಂದ ತಡೆದು ಕೊಳ್ಳುವುದಾಗದು. ಹೇಗೂ ಹಾಳಾಗಿದ್ದೇನೆ. ಇನ್ನು ನನ್ನ ಪಾಪದಿಂದ ನಾನು ಸಾಯುವವನೆ. ಅದಕ್ಕೂ ಮೊದಲು ಆ ಸ್ವರ್ಗಸುಖವನ್ನು ಉಣ್ಣುತ್ತ ಸಾಯುತ್ತೇನೆ" ಎಂದು ಮುಷ್ಟಿ ಮೈಥುನದ ಬಲೆಯಲ್ಲಿ ಬಿಡಿಸಿಕೊಳ್ಳ ಲಾಗದಷ್ಟು ತೊಡಕಿಕೊಂಡ ಒಬ್ಬ ನವಯುವಕನು ಬರೆದಿದ್ದಾನೆ.

ಯೌವನವು ಜೀವನದ ಹೊಸ್ತಿಲವಿದ್ದಂತೆ. ಯುವಕರು ಪ್ರೌಢರಾಗ ಬೇಕು; ಅಂತರಂಗದಲ್ಲಿ ಮಿನುಕಾಡುತ್ತಿರುವ ಭವ್ಯಶಕ್ತಿಗಳನ್ನು ಎಚ್ಚರಿಸಿ ವಿಕಾಸಗೊಳಿಸಿ ಜಗತ್ತಿನಲ್ಲಿ ಬೆಳಗಬೇಕು. ಜಗತ್ತಿಗೆ ಬೆಳಕು ತೋರಬೇಕು; ಮನುಷ್ಯರಾಗಬೇಕು; ಮುಂತಾದ ಮನೋಹರ ಸ್ವಪ್ನಗಳನ್ನು ಕಂಡು ಉತ್ಸಾಹದಿಂದ ವಿದ್ಯುತ್ವೇಗದಿಂದ ನಲಿದಾಡಬೇಕಾದ ಯುವಕರು "ಅಯ್ಯೋ ನನ್ನ ಅವಸ್ಥೆ ಹೀಗಾಯಿತೇ?" ಎಂದು ಮೊಳಕೈಯೂರುವುದು ಎಷ್ಟು ಕರುಣಾಸ್ಪದವಾಗಿದೆ! ನಿಜವಾಗಿಯೂ ಮುಷ್ಟಿ ಮೈಥುನವು ಪಾಪಕರವೇ? ಮನುಷ್ಯನನ್ನು ಜನ್ಮ ಜನ್ಮಾಂತರದಲ್ಲಿಯೂ ನರಕಕ್ಕೆಳೆಯುವಷ್ಟು ಘೋರವಾದ ಪಾಪವೇ ಅದು? ಮುಷ್ಟಿ ಮೈಥುನದಿಂದ ನಪುಂಸಕತೆಯುಂಟಾಗುವದೇ? ಅದರಿಂದ ಮನುಷ್ಯನು ಹೇಡಿ ಹೆಂಗಸಾಗುವನೇ? ಮುಷ್ಟಿ ಮೈಥುನ ಮಾಡಿಕೊಂಡ ಹೆಂಗಸು ಬಂಜೆಯಾಗುವಳೇ? ಅದರಿಂದ ಹುಚ್ಚು ಹಿಡಿಯುವದೇ? ಮುಂತಾಗಿ ನೂರಾರು ಪ್ರಶ್ನೆಗಳು ಮುಷ್ಟಿ ಮೈಥುನಿಗಳ ಮನದೆದುರು ಬಂದ ಹಗಲಿರುಳೂ ಅಂಜಿಸುವವು. ಆ ಅಂಜಿಕೆಯು ತರುಣ ತರುಣಿಯರ ಜೀವನದ ಅತಿ ಮುಖ್ಯಾಂಶವನ್ನು ನಿಟ್ಟುಸಿರಿನಿಂದ ಒಣಗಿಸಿ ಬಿಡುವದು. ದೇಶದ

ಮುಂದಿನ ಅಭ್ಯುದಯವು ಇಂದಿನ ತರುಣ ತರುಣಿಯರ ಸುಖ, ಸ್ವಾಸ್ಥ್ಯ, ಶ್ರೇಯಸ್ಸುಗಳನ್ನವಲಂಬಿಸಿದೆ. ಅಂಥ ಹರೆಯರ ಬಾಳಿನ ಬೆಳಗಿನಲ್ಲಿ ನಪುಂಸಕತೆ, ಅಕಾಲ ಮೃತ್ಯುಗಳ ಉದಯರಾಗವಾಯಿತೆಂದರೆ ಅವರ ದೇಶವು ಪ್ರಗತಿಪುರೋವೃದ್ಧಿಗಳ ಕನಸನ್ನಾದರೂ ಎಂತು ಕಾಣುವದು? ಯಾವುದೊಂದು ರಾಷ್ಟ್ರವು ಸ್ವಾತಂತ್ರ್ಯ ಶಕ್ತಿಗಳಿಂದ ಮೆರೆಯಬೇಕಾದರೆ ಅಲ್ಲಿಯ ಯುವಕರು ಆತ್ಮವಿಶ್ವಾಸ, ಸಾಹಸ, ಉತ್ಸಾಹಗಳಿಂದ ತುಂಬಿದವರಾಗಬೇಕು. ಅಂಜಿಕೆ, ದಿಗಿಲುಗಳಿರುವಲ್ಲಿ ಆತ್ಮವಿಶ್ವಾಸವಿಲ್ಲ. ಮತ್ತು ಅಜ್ಞಾನ ಕುರುಡು ನಂಬಿಗೆಗಳಿರುವಲ್ಲಿ ಅಂಜಿಕೆ ದಿಗಿಲುಗಳು ತಪ್ಪಲಾರವು. ಆದ್ದರಿಂದ ಯುವಕ ಯುವತಿಯರು ಆತ್ಮವಿಶ್ವಾಸ, ಸಾಹಸೋಲ್ಲಾಸಗಳಿಂದ ನಲಿಯಬೇಕಾದರೆ ಅವರಿಗೆ ತಮ್ಮ ಜೀವನದಲ್ಲಿಯ ವಿವಿಧಾವಸ್ಥೆಗಳಲ್ಲಿ ತೋರಿ ಕೊಳ್ಳುವ ದೇಹ ಮನಸ್ಸುಗಳ ಪ್ರವೃತ್ತಿಗಳ ಜ್ಞಾನವಿರಬೇಕು. ಅವುಗಳ ಕಾರಣ ಪರಿಣಾಮಗಳು ತಿಳಿದಿರಬೇಕು. ಜ್ಞಾನವಿದ್ದವರನ್ನು ಯಾರೂ ಬೆದರಿಸಲಾರರು. ಮಾರೆಮ್ಮನಿಗೆ ಸಾವಿರ ಕುರಿಗಳನ್ನು ಕಡಿದರೆ ಮಾರಿಕಾ ಬೇನೆಯು ಊರು ಬಿಟ್ಟು ಓಡುವದು ಎಂದೆಂದರೆ ನಾವು ನಗುವೆವು. ಏಕೆಂದರೆ ಮಾರಿಕಾ ರೋಗದ ಕಾರಣಗಳು ನಮಗೆ ತಿಳಿದಿವೆ. ಅದನ್ನು ನಿವಾರಿಸುವ ರೀತಿಯೂ ತಿಳಿದಿದೆ. ಅದರಂತೆ ಕಾಮವೃತ್ತಿಯ ಉದಯ, ಅದರ ಪ್ರವೃತ್ತಿ, ಪರಿಣಾಮಗಳು ಮತ್ತು ಅದನ್ನು ನಮ್ಮ ದೇಹ ಮನಸ್ಸುಗಳ ಅಭ್ಯುದಯಕ್ಕೆ ಸಾಧಕವಾಗುವಂತೆ ಉಪಯೋಗಿಸುವ ರೀತಿಗಳನ್ನು ವೈಜ್ಞಾನಿಕವಾಗಿ ತಿಳಿದು ಕೊಂಡ ತರುಣ ತರುಣಿಯರಿಗೆ ನೀತಿ ಪಂಡಿತರ (?) ಪೊಳ್ಳು ಬೆದರಿಕೆಗಳಿಂದ ದಿಗಿಲುಂಟಾಗದು. ಮುಷ್ಟಿಮೈಥುನದಿಂದ ಅಕಾಲ ಮೃತ್ಯುವುಂಟಾಗುವದು ಎಂದು ಯಾರಾದರೂ ಅಂದರೆ ಕಾಮವಿಜ್ಞಾನವನ್ನು ಅಭ್ಯಸಿಸಿದ ತರುಣ ತರುಣಿಯರು ಖಂಡಿತವಾಗಿ ನಕ್ಕು ಬಿಡುವರು.

ಜೀವನಕ್ಕೆ ಅನೇಕ ಅಂಗಗಳಿವೆ. ಅವುಗಳಲ್ಲಿ ಕಾಮಜೀವನವೂ ಒಂದು ಪ್ರಮುಖಾಂಗವಾಗಿದೆ. ಮಿಕ್ಕ ಅಂಗಗಳ ಪ್ರಗತಿ ಪೋಷಣೆಗಳ, ಜ್ಞಾನ ಪ್ರಸಾರಕ್ಕಾಗಿ ಸಾಹಿತ್ಯ ನಿರ್ಮಾಣವಾದಂತೆ ಕಾಮಜೀವನದ ಸುಖ ಪ್ರಗತಿಗಳ ಜ್ಞಾನಕ್ಕಾಗಿಯೂ ಪರಭಾಷೆಗಳಲ್ಲಿ ಅಸಂಖ್ಯ ಗ್ರಂಥಗಳಾಗಿವೆ. ಬರಿ ಮುಷ್ಟಿ ಮೈಥುನದ ವಿಷಯಕ್ಕೆ ಸಾವಿರಾರು ಗ್ರಂಥಗಳಿವೆ. ಅವುಗಳಲ್ಲಿ

ಅಧಿಕಾರವಾಣಿಯಿಂದ ಬರೆಯಲ್ಪಟ್ಟವುಗಳ ಸಾರರೂಪವಾಗಿ ಈ ಗ್ರಂಥವನ್ನು ಬರೆಯಲಾಗಿದೆ. ಕನ್ನಡ ತರುಣ ತರುಣಿಯರಲ್ಲಿ ಮುಷ್ಟಿಮೈಥುನದ ವಿಷಯಕ್ಕೆ ಮತ್ತು ತತ್ಸದೃಶವಾದ ತಾರುಣ್ಯದ ಇನ್ನು ಕೆಲವು ಪ್ರವೃತ್ತಿಗಳ ವಿಷಯಕ್ಕೆ ಸರಿಯಾದ ಅರಿವುಂಟಾಗಬೇಕು. ತಾವು ಜಾರುತ್ತಿರುವುದೆಲ್ಲಿ! ಕಾಮವೃತ್ತಿಗಳ ಬಿರುಗಾಳಿ ಬೀಸುತ್ತಿರುವ ಹರೆಯದಲ್ಲಿ ತೂಕ ತಪ್ಪದೆ ಹೇಗೆ ನಡೆಯಬೇಕು? ಪ್ರಮಾದದಿಂದ ತೂಕ ತಪ್ಪಿದರೆ ತಡೆದುಕೊಳ್ಳುವುದೆಂತು? ಎಂಬ ಸಮಸ್ಯೆಗಳನ್ನು ತಾವೇ ಬಿಡಿಸಿಕೊಳ್ಳಲು ಸಮರ್ಥರಾಗಬೇಕು. ಅವರ ತಾರುಣ್ಯದ ಆಕಾಶದಿಂದ ನಿರಾಸೆ, ದಿಗಿಲುಗಳ ಮೋಡಗಳು ಚದರಿ ಆತ್ಮವಿಶ್ವಾಸ, ಸಾಹಸದ ಸೂರ್ಯಚಂದ್ರರು ಬೆಳಗಬೇಕು. ಅವರು ಮನುಷ್ಯರಾಗಿ ನಾಡಸೇವೆಗೆ ನೆರವಾಗಬೇಕು. ಇಷ್ಟೆಲ್ಲ ಕನಸುಗಳು ಈ ಗ್ರಂಥಲೇಖನಕ್ಕೆ ಹುರಿದುಂಬಿಸಿವೆ. ಹಿಂದಿನ ಪುಸ್ತಕಗಳಿಗೆ ಕೊಟ್ಟಂತೆ ಈ ಪುಸ್ತಕಕ್ಕೂ ಜ್ಞಾನ ಪೂಜಾರಿಗಳಾದ ಕನ್ನಡಿಗರು ಹೃತ್ಪೂರ್ವಕ ಪ್ರೋತ್ಸಾಹವನ್ನು ಕೊಡುವರೆಂದು ನಂಬಿದ್ದೇವೆ.



# ಎರಡನೆಯ ಪ್ರಕರಣ.



## ಉದ್ಗಮ

ಈ ಪುಸ್ತಕದಲ್ಲಿ ಮುಷ್ಟಿ ಮೈಥುನದ ವಿಷಯವೇ ಪ್ರಾಮುಖ್ಯವಾಗಿ ವಿವೇಚಿಸಲ್ಪಟ್ಟಿದ್ದರೂ ಇದಕ್ಕೆ "ಸ್ವರತಿ" ಎಂಬ ವಿಚಿತ್ರ ಹೆಸರನ್ನೇಕೆ ಇಡಲಾಗಿದೆ ಎಂದು ಅನೇಕ ವಾಚಕರಿಗೆ ಆಶ್ಚರ್ಯವಾಗಬಹುದು. ವಸ್ತುತಃ ಮುಷ್ಟಿ ಮೈಥುನವು ಅಂತರಂಗ ವಿಕಾರದ ಒಂದು ಲಕ್ಷಣ ಮಾತ್ರವಾಗಿದೆ. ಮುಷ್ಟಿ ಮೈಥುನವೆಂದರೆ ಮುಷ್ಟಿಯ ಸಹಾಯದಿಂದ ಲಿಂಗವನ್ನು ಚಾಲನೆಗೊಳಿಸಿ ವೀರ್ಯವನ್ನು ಸ್ಖಲಿಸಿಕೊಳ್ಳುವುದು ಎಂದು ಶಬ್ದಾರ್ಥವಾಗುವದು. ಸ್ತ್ರೀಯರಲ್ಲಿಯೂ ಮುಷ್ಟಿಮೈಥುನವು ಪ್ರಚಲಿತವಾಗಿರುವುದನ್ನು ನಾವು ಬಲ್ಲೆವು. ಆದರೆ ಅವರು ತಮ್ಮನ್ನು ಉದ್ರೇಕಿಸಿಕೊಳ್ಳಲಿಕ್ಕೆ ಮುಷ್ಟಿಯನ್ನು ಉಪಯೋಗಿಸುವುದು ಸಾಧ್ಯವಿಲ್ಲ; ಆದ್ದರಿಂದ ಸ್ತ್ರೀಪುರುಷರಿಬ್ಬರಿಗೂ ಅನ್ವಯಿಸಲೆಂದು ಕೆಲವು ಲೇಖಕರು ಹಸ್ತಮೈಥುನ, ಹಸ್ತಕ್ರಿಯೆ, ಹಸ್ತಪ್ರಯೋಗ ಮುಂತಾದ ಶಬ್ದಗಳನ್ನು ಪ್ರಯೋಗಿಸುವ ರೂಢಿಯಿದೆ. ಆ ಶಬ್ದಗಳು ಕೂಡ ಮುಷ್ಟಿಮೈಥುನಿಗಳ ವಿಕಾರವನ್ನು ವಿವರಿಸಲಾರವು. ಅಲ್ಲದೆ ಮುಷ್ಟಿಮೈಥುನದ ನೂರಾರು ಪ್ರಕಾರಗಳೂ ಆ ಶಬ್ದಗಳಲ್ಲಿ ಒಳಗೊಳ್ಳಲಾರವು. "ಮೈಥುನ" ಎಂಬುದು "ಮಿಥುನ" ಎಂಬ ಎರಡು ಪ್ರೇಮಿ ವ್ಯಕ್ತಿಗಳನ್ನು ಸೂಚಿಸುವ ಶಬ್ದದಿಂದ ಹುಟ್ಟಿದೆ. ಹಸ್ತಮೈಥುನದಲ್ಲಿ ಎರಡು ವ್ಯಕ್ತಿಗಳ ಸಂಗ ಸಂಬಂಧಗಳಿರುವದಿಲ್ಲ. ಆದ್ದರಿಂದ ಮುಷ್ಟಿಮೈಥುನಿಗಳ ಕ್ರೀಡೆಗೆ "ಮೈಥುನ" ವೆಂಬ ಹೆಸರು ಅನ್ವರ್ಥಕವಾಗಿಲ್ಲ.

ಇನ್ನು ಮುಷ್ಟಿಮೈಥುನ ಅಥವಾ ಹಸ್ತಪ್ರಯೋಗದ ಒಲವುಳ್ಳ ತರುಣ ತರುಣಿಯರು ತಮ್ಮ ಉದ್ರೇಕ ಸ್ಖಲನಗಳಿಗೆ ಯಾವಾಗಲೂ ಹಸ್ತವನ್ನೇ ಉಪಯೋಗಿಸುತ್ತಾರೆಂಬ ನಿಯಮವಿಲ್ಲ. ಹಸ್ತದ ಸಹಾಯವೆ ಇಲ್ಲದೆ ಕೆಲವು ಚಲನೆಗಳಿಂದ ಉದ್ರಿಕ್ತರಾಗುವ ಅಭ್ಯಾಸಗಳೂ ತುಂಬ ಪ್ರಚಾರದಲ್ಲಿವೆ. ಹ್ಯಾವ್‌ಲೋಕ್ ಎಲಿಸನು ಒಬ್ಬ ತರುಣಿಯು ಕೈಯ ಸಹಾಯವಿಲ್ಲದೆಯೆ ಉದ್ರೇಕಗೊಳ್ಳುತ್ತಿದ್ದ ಕ್ರಮವನ್ನು ವರ್ಣಿಸಿದ್ದಾನೆ. ಅವಳು ಒಂದು ದಿನ ರೇಲ್ವೆ ಪ್ಲ್ಯಾಟ್‌ಫೋರ್ಮಿನಲ್ಲಿ ಒಂದು ಬೆಂಚಿನ ಮೇಲೆ ಕೂತಿದ್ದಳು. ಇದ್ದ ಹಾಗೆ ಅವಳು ಹಿಂದಕ್ಕೆ ಒರಗಿಕೊಂಡಳು. ಕಾಲುಗಳನ್ನು ಒಂದರ ಮೇಲೊಂದು ಬಿಗಿಯಾಗಿ ಹಾಕಿಕೊಂಡಳು. ನಂತರ ಹಲವು ಸಲ ಲೀಲಾ ಕಾರವಾಗಿ ಹಿಂದಕ್ಕೂ ಮುಂದಕ್ಕೂ ತೂಗಾಡಿದಳು. ದಣಿದವಳಂತೆ ಅರೆಗಣ್ಣು ಮುಚ್ಚಿ ಹಿಂದಕ್ಕೆ ಒರಗಿಕೊಂಡಳು. ಆಗ ಅವಳ ಮೊಗವು ಉದ್ರೇಕದಿಂದ ಕೆಂಪೇರಿತ್ತು. ಸಾಮಾನ್ಯ ವ್ಯಕ್ತಿಗಳಿಗೆ ಆ ಯುವತಿಯ ಆ ಕ್ರೀಡೆಯಲ್ಲಿ ವಿಶೇಷವೇನೂ ತೋರಲಾರದು. ಆದರೆ ವಿಜ್ಞಾನಿಗಳ ನುರಿತ ಕಂಣಿಗೆ ಖಂಡಿತವಾಗಿ ಅದೊಂದು ಕಾಮಲೀಲೆಯೆಂದು ತಿಳಿಯುವಂತಿತ್ತು. ಡಾ. ನಾರ್ಮನ್ ಹೇರ್‌ನು ಒಬ್ಬ ವಿದ್ಯಾರ್ಥಿಯ ಉದಾಹರಣೆಯನ್ನು ಕೊಟ್ಟಿದ್ದಾನೆ. ಅವನೆ ಹೇಳುತ್ತಾನೆ "ಆಗ ನನಗೆ ೯ ವರ್ಷ. ಪ್ರಾಥಮಿಕ ಮೂರನೆ ವರ್ಗದಲ್ಲಿದ್ದೆ. ಒಂದು ಕಠಿಣವಾದ ಗಣಿತದ ಪ್ರಶ್ನೆಯನ್ನು ಎಷ್ಟು ಕಷ್ಟಪಟ್ಟರೂ ಬಿಡಿಸಲಾಗಲಿಲ್ಲ. ಬೇಸರವಾಗಿ ಒಮ್ಮೆಲೆ ಎರಡೂ ಕೈಗಳಿಂದ ನನ್ನ ತೊಡೆಗಳೆರಡನ್ನೂ ಗಟ್ಟಿಯಾಗಿ ಅವಚಿಕೊಂಡೆ. ಕೆಲವು ಸಲ ಉತ್ಸಾಹದಿಂದ ಹಾಗೆ ಹೀಗೆ ಒಲೆದಾಡಿದೆ. ಒಡನೆ ನನಗೆ ಅವರ್ಣನೀಯವಾದ ಆನಂದವಾಯಿತು. ಅದರಿಂದ ಮುಂದೆ ಸ್ಖಲನವೂ ಆಗಹತ್ತಿತ್ತು. ಇಂದಿಗೂ ಕೊಂಚ ತೊಂದರೆಯ ಕೆಲಸವೇನಿದ್ದರೂ ಅದೇ ಬಗೆಯಿಂದ ಕಾಲುಗಳನ್ನಪ್ಪಿ ಸ್ಖಲಿಸಿಕೊಳ್ಳುವ ಪ್ರವೃತ್ತಿಯು ತಡೆಯದಂತಾಗುವದು. ಒಂದು ಪರೀಕ್ಷೆಗೆ ಕೂತಾಗ ದಿನಕ್ಕೆ ೧೦–೧೫ ಸಲದವರೆಗೂ ಹಾಗೆ ಸ್ಖಲಿಸಿಕೊಂಡದ್ದುಂಟು. ಸಮಾಧಾನದ ದಿನಗಳಲ್ಲಿ ನಾನೆಂದೂ ಮುಷ್ಟಿಮೈಥುನವನ್ನು ಮಾಡಿಕೊಂಡಿಲ್ಲ."

ಮೇಲಿನ ಉದಾಹರಣೆಗಳಿಂದ ಹಸ್ತದ ಸಹಾಯವಿಲ್ಲದೆ ನಡೆಯುವ ಮುಷ್ಟಿಮೈಥುನವೂ ಇದೆ ಎಂದು ವ್ಯಕ್ತವಾಯಿತು. ಮತ್ತು ಮುಷ್ಟಿ ಮೈಥುನವು ಒಳಗಿನ ಯಾವುದೋ ಒಂದು ಬಯಕೆಯ ಒಂದು ಲಕ್ಷಣ ಮಾತ್ರವಾಗಿದೆಯೆಂಬುದೂ ಸ್ಪಷ್ಟವಾದಂತಾಯಿತು. ನಮ್ಮ ಗ್ರಂಥವು ಪರಿ-ಪೂರ್ಣವೆನಿಸಬೇಕಾದರೆ ಆ ಒಳಗಿನ ಬಯಕೆಯ ಅಥವಾ ವಿಕಾರದ ಪೂರ್ಣ ಪರಿಚಯವನ್ನು ಅದು ಮಾಡಿಕೊಡಬೇಕು. ಇಲ್ಲದಿದ್ದರೆ ಮೈ ಬಿಸಿಯಾಗಿದೆ ಎಂದು ರೋಗಿಯೆಂದಾಗ ತಣ್ಣೀರನ್ನು ಹುಯಿದುಕೊ ಎಂದು ಉಪಾಯವನ್ನು ಸೂಚಿಸಿದ ವೈದ್ಯನಂತಾಗುವದು. ದೇಹದೊಳಗಿನ ಯಾವುದೋ ಒಂದು ಅಕ್ರಮದಿಂದ ಜ್ವರ ಬಂದಿ (ಮೈ ಬಿಸಿಯಾಗಿ)ರುವದು. ಒಳಗಿನ ಅಕ್ರಮವನ್ನು ಸರಿಪಡಿಸದೆ ಎಷ್ಟು ತಣ್ಣೀರು ಹುಯ್ದರೂ ಜ್ವರವಿಳಿಯಲಾರದು. ಹಾಗೆಯೆ ಬರಿ ಬಾಹ್ಯ ಅಂಗಚಲನೆಗಳ ಮೇಲಿಂದಲೆ ಯಾವುದೊಂದು ಚಟಕ್ಕೆ ನಾಮಕರಣ ಮಾಡುವದು ವಿಜ್ಞಾನದ ರೀತಿಯಲ್ಲ. ಹಸ್ತಸಹಿತವಾಗಲಿ ಅಥವಾ ಹಸ್ತ ರಹಿತವಾಗಲಿ ಮತ್ತೊಬ್ಬ ಪ್ರಿಯ-ಪ್ರಿಯೆಯ ಆವಶ್ಯಕತೆಯೆನಿಸದೆ ಒಬ್ಬರೇ ವಿವಿಧ ರೀತಿಯಲ್ಲಿ ಉದ್ರಿಕ್ತರಾಗುವ ತರುಣ ತರುಣಿಯರ ಅಂತರಂಗದಲ್ಲಿರುವ ವಿಕಾರವಾವುದು? ಎಂಥ ಮನೋಬಲಕ್ಕೂ ಬಗ್ಗದ ಒಳಗಿನ ಆ ಅಕ್ರಮವಾವುದು? ಎಂಬುವನ್ನು ತಿಳಿದುಕೊಳ್ಳುವುದೇ ಮುಷ್ಟಿ ಮೈಥುನವನ್ನು ತಡೆಗಟ್ಟುವ ಯಶಸ್ವಿಯಾದ ಉಪಾಯವಾಗಿದೆ.

ಮುಷ್ಟಿಮೈಥುನವು ಕಾಮವಾಸನೆಯನ್ನು ಶಾಂತಗೊಳಿಸಿಕೊಳ್ಳುವ ಪ್ರವೃತ್ತಿಯಾಗಿದೆ ಎಂಬುದು ಎಲ್ಲರಿಗೂ ಗೊತ್ತಿದೆ. ಆದರೆ ಕಾಮವಾಸನೆಯ ನೈಸರ್ಗಿಕವಾದ ಗುರಿಯು ಮುಷ್ಟಿಮೈಥುನವಲ್ಲ. ಕಾಮವೃತ್ತಿಯು ಸ್ತ್ರೀ ಪುರುಷರನ್ನು ಒಂದೆಡೆಗೆ ಆಕರ್ಷಿಸಿ ಸಂಭೋಗದಲ್ಲಿ ಕೊನೆಗಾಣಿಸಿ ಮನುಷ್ಯ ಜಾತಿಯ ಸಂತಾನ ವೃದ್ಧಿಗೊಳಿಸುವ ಪ್ರಕೃತಿ ಪ್ರೇರಣೆಯಾಗಿದೆ. ಮತ್ತು ಪ್ರಕೃತಿಯ ಪ್ರೇರಣೆಯು ಅದಮ್ಯವಾಗಿರುತ್ತದೆ. ದೇಹ ಮನಸ್ಸುಗಳ ಬಲವನ್ನು ಅಪ್ಮ್ರತವಾಗಿ ಬೆಳೆಸಿಕೊಂಡವರು ಕೂಡ ತಿಳಿದೋ ತಿಳಿಯದೆಯೋ ಪ್ರಕೃತಿಯ ಕಾಮ ಪ್ರೇರಣೆಗೆ ಬಗ್ಗುತ್ತಾರೆ. ಮತ್ತು **ಪಕೃತಿ ಪ್ರೇರಣೆಗೆ ತಡೆಗಳನ್ನೊಡ್ಡದ ಜನಾಂಗಗಳಲ್ಲಿ ವಿಕೃತ ಕಾಮಿಗಳು ಸಿಗಲಾರರು. ನೈಸರ್ಗಿಕ ಕಾಮ ಪ್ರೇರಣೆಗೆ ತಡೆಗಳು ಹೆಚ್ಚುತ್ತ ಹೋದಂತೆ ಅನೈಸ**

**ಗಿಕ ಕಾಮ ಪ್ರವೃತ್ತಿಗಳೂ ಬೆಳೆಯುತ್ತಹೋಗುವವು.** ಸಮರತಿ (ಗುದಮೈಥುನ), ಕುಮಾರೀರತಿ (ಮೈನೆರೆಯದವರ ಬಲಾತ್ಕಾರ), **ಪೀಡಾ** ರತಿ (ಪ್ರಿಯ-ಪ್ರಿಯೆಯರನ್ನು ಪೀಡಿಸಿ ಗಾಯಗೊಳಿಸುವದರಲ್ಲಿಯೆ ಕಾಮ ತೃಪ್ತಿ), ಪ್ರದರ್ಶನರತಿ (ಕಾಮಾಂಗಗಳನ್ನು ತೋರಿಸುವುದರಲ್ಲಿ ಕಾಮತೃಪ್ತಿ) ಮುಂತಾದ ರತಿ ವಿಕೃತಿಗಳು ನೈಸರ್ಗಿಕ ಪ್ರೇರಣೆಗೆ ತಡೆಯುಳ್ಳ ಸಮಾಜ ಗಳಲ್ಲಿಯೆ ವಿಶೇಷವಾಗಿ ಕಂಡುಬರುತ್ತವೆಂದು ತಜ್ಞರು ಹೇಳುತ್ತಾರೆ.

ನೈಸರ್ಗಿಕ ಕಾಮಪ್ರೇರಣೆಯು ಸಫಲವಾಗುವಂತೆ ಪ್ರಕೃತಿಯು ಆ ಪ್ರೇರಣೆಯ ತೃಪ್ತಿಯಲ್ಲಿ ಅವರ್ಣನೀಯವಾದ ಸುಖವನ್ನು ಇಟ್ಟಿದ್ದಾಳೆ. ಆ ಸುಖದ ಮುಂದೆ ಮನುಷ್ಯನು ಮಿಕ್ಕೆಲ್ಲ ಸುಖಗಳನ್ನು ನಿವಾಳಿಸಿ ಒಗೆಯು ವನು. ಭಾರತದಲ್ಲಿ ತೀರ ತುಸು ಪ್ರಮಾಣದಲ್ಲಿದ್ದ ಹಲ ಕೆಲವು ಸನ್ಯಾಸಿ ಗಳನ್ನು ಬಿಟ್ಟರೆ ಉಳಿದ ಮಹಾ ಸ್ತ್ರೀಪುರುಷರೆಲ್ಲ ಕಾಮತೃಪ್ತಿಯ ಸುಖ ವನ್ನು ಅನುಪಮವಾದುದೆಂದು ಆಡಿದ್ದಾರೆ. ಉಪನಿಷತ್ತುಗಳಂತಹ ಭಾರ ತೀಯ ಉಚ್ಚ ಗ್ರಂಥಗಳಲ್ಲಿ ಕೂಡ ಬ್ರಹ್ಮಾನಂದವನ್ನು "ಅಶುಕ್ರವಾದ ರತಿ" (ವೀರ್ಯ ಸ್ಖಲನವಿಲ್ಲದ ಕಾಮತೃಪ್ತಿ) ಗೆ ಹೋಲಿಸಿದ್ದಾರೆ. ಕಾವ್ಯಗಳಲ್ಲಿ ಯಂತೂ ಕಾಮಪ್ರೇರಣೆಯೆ ಒಂದು ಪ್ರಮುಖವಾದ ರಸವಾಗಿ ಮೆರೆದಿದೆ. ವೈದ್ಯಗ್ರಂಥಗಳಲ್ಲಿ ಸಹ ಔಷಧಗಳಿಂದ ಸಿಗುವ ಗುಣವನ್ನು ಕಾಮಕ್ರೀಡೆಗೆ ಹೋಲಿಸಿದ ಉದಾಹರಣೆಗಳಿವೆ. ಬೇಕಾದರೆ ಲೋಲಂಬರಾಜನು ಬರೆದ "ವೈದ್ಯಜೀವನ" ಗ್ರಂಥವನ್ನು ಓದಿ ನೋಡಿರಿ. ಅವನು ಯಾವುದಾದ ರೊಂದು ಕಷಾಯವನ್ನು ಹೇಳಿ ಅದನ್ನು ಸೇವಿಸಿದರೆ "ಯೌವನ ಭರಿತವಾದ ಕಠಿನ ಸ್ತನಗಳುಳ್ಳ ತರುಣಿಯನ್ನು ತಬ್ಬಿದರೆ ಹೇಗೆ ದಿವ್ಯಾನಂದವಾಗು ವದೋ ಹಾಗೆ" ಬೇನೆಯು ನಾಶವಾಗಿ ಆರೋಗ್ಯವು ಪ್ರಾಪ್ತವಾಗುವದು ಎಂದು ಹೇಳುವನು.

ಸಾರಾಂಶವೇನೆಂದರೆ ಪ್ರಕೃತಿಯು ಸಂತಾನ ಸಿದ್ಧಿಯ ಉದ್ದೇಶವನ್ನು ಕೈಗೂಡಿಸುವದಕ್ಕಾಗಿ ಸ್ತ್ರೀಪುರುಷರಲ್ಲಿ ಕಾಮಪ್ರೇರಣೆಯನ್ನು ಹುಟ್ಟಿಸಿ ಸಂಭೋಗಕ್ಕೆ ತಳ್ಳುತ್ತಾಳೆ. ವೇಷಧಾರಿ ಧಾರ್ಮಿಕರಿಗೆ ಸಂಭೋಗವು ಎಷ್ಟೇ ಪಾಪಕರ ಅಥವಾ ಅಶ್ಲೀಲವಾಗಿದ್ದರೂ ಪ್ರಕೃತಿದೇವಿಗೆ ಸಂಭೋಗ ವೆಂದರೆ ಒಂದು ಸನಾತನ ತತ್ವವನ್ನು ಅಖಂಡವಾಗಿ ಸಾಗಿಸುವ ಪವಿತ್ರ

ಕರ್ತವ್ಯವಾಗಿದೆ. ಅದು ಪವಿತ್ರವಾದುದರಿಂದಲೆ ಅದರ ಸಿದ್ಧಿಗೆ ಮನುಷ್ಯನು ಹುಟ್ಟಿದ ಮೊದಲುಗೊಂಡು ಹರೆಯುವವರೆಗೆ ದೇಹ ಮನಸ್ಸುಗಳಲ್ಲಿ ಕ್ರಮವಾದ ಮಾರ್ಪಾಡುಗಳನ್ನು ಮಾಡಿ ಕೊನೆಗೆ ಸಂಭೋಗ ಲಾಲಸೆಯನ್ನು ಪ್ರಕೃತಿಯು ಹುಟ್ಟಿಸುತ್ತಾಳೆ. ಜನ್ಮದಾರಭ್ಯ ಕಾಮವು ಗುಪ್ತವಾಗಿದ್ದರೂ ಬಾಲ್ಯದಲ್ಲಿ ಅದರಿಂದ ಸಂಭೋಗದ ಒಲವುಂಟಾಗುವದಿಲ್ಲ. ಸ್ತ್ರೀಪುರುಷರು ನೈಸರ್ಗಿಕವಾದ ಆಹಾರ ವಿಹಾರಗಳಿಂದ ಬೆಳೆದಿದ್ದರೆ ಅವರ ಅಂಗಾಂಗಗಳು ಪೂರ್ಣ ಪರಿಪಕ್ವಾವಸ್ಥೆಗೆ ಮುಟ್ಟಿ ಸುದೃಢ ನಿರೋಗಿಯಾದ ಸಂತಾನವನ್ನು ಹುಟ್ಟಿಸುವ ಸಾಮರ್ಥ್ಯವುಂಟಾಗುವವರೆಗೆ ಅವರಲ್ಲಿ ಸಂಭೋಗದ ಪ್ರವೃತ್ತಿಯುಂಟಾಗುವದಿಲ್ಲ. **ನೈಸರ್ಗಿಕವಾದ ಜೀವನದಲ್ಲಿ ಸಂಭೋಗ ಪ್ರವೃತ್ತಿಯು, ದೇಹ ಮನಸ್ಸುಗಳು ಪಕ್ವಾವಸ್ಥೆಗೆ ಬಂದುದರ ಲಕ್ಷಣವಾಗಿದೆ.**

ಆದರೆ ಆ ಅವಸ್ಥೆಯ ಪೂರ್ವದಲ್ಲಿ ಕೆಲವು ಅವಸ್ಥೆಗಳಿವೆ. ಆ ಪೂರ್ವಾವಸ್ಥೆಗಳಲ್ಲಿ ಕ್ರಮವಾಗಿ ತನುಮನಗಳು ಬೆಳೆದು ತಾರುಣ್ಯಾವಸ್ಥೆಯಲ್ಲಿ ಅರಳುವವು. ಶೈಶವ, ಬಾಲ್ಯ, ಕೌಮಾರಾವಸ್ಥೆಗಳು ಸಮಂಜಸವಾಗಿ ದಾಟಿದ ನಂತರ ತಾರುಣ್ಯಾವಸ್ಥೆಯು ಪೂರ್ಣ ಸೌಂದರ್ಯ ಶಕ್ತಿಗಳೊಡನೆ ವಿಕಸಿತವಾಗುವದು. ಮರವಾಗಿ ಬೆಳೆಯುವ ಮೊದಲು ಮೊಳಕೆಯೊಡೆದು ಸಸಿಯಾಗಿ ಗಿಡವಾಗಿ ಬಲಿತು ಚಿಗುರಿ ಹೂ ಕಾಯಿಗಳಾಗಬೇಕು. ಹಾಗೆಯೆ ಯೌವನದ ಕಾಮ ಜೀವನದ ಸಿದ್ಧತೆಯು ಗುಪ್ತವಾಗಿ ತತ್ಪೂರ್ವಾವಸ್ಥೆಗಳಲ್ಲಿ ಕ್ರಮಶಃ ನಡೆಯುತ್ತದೆ. ಕಾಮಜೀವನದ ಹೃದಯ ಸಂಭೋಗವೆಂದು ಹಿಂದೆ ಹೇಳಿದ್ದೇವೆ. ಸಂಭೋಗಕ್ಕೆ "ಪ್ರತಿರತಿ" ಅಂದರೆ ಗಂಡಿಗೆ ಹೆಂಣಿನ ವಿಷಯದಲ್ಲಿ ಪ್ರೀತಿ; ಹೆಂಣಿಗೆ ಗಂಡಿನ ವಿಷಯದಲ್ಲಿ ಪ್ರೀತಿಯುಂಟಾಗಬೇಕು. (ಅದಕ್ಕೆ ಇಂಗ್ರೇಜಿಯಲ್ಲಿ Heterosexual love ಎನ್ನುತ್ತಾರೆ). ಆದರೆ ಮಗು ಹುಟ್ಟಿದಾಗಿನಿಂದಲೆ ಈ ಪ್ರತಿಲಿಂಗಿ (ವಿರುದ್ಧಲಿಂಗಿ) ಪ್ರೇಮವಿರುವದಿಲ್ಲ. ಅದು ಕ್ರಮೇಣ ರೂಪುಗೊಳ್ಳುವ ರೀತಿಯನ್ನು ಸಿಗ್ಮಂಡ ಫ್ರಾಯಿಡ್ ಎಂಬ ವಿಜ್ಞಾನಿಯು ಬಹು ಸೂಕ್ಷ್ಮವಾಗಿ ಪರಿಶೀಲಿಸಿ ಮನೋವಿಶ್ಲೇಷಣ ಶಾಸ್ತ್ರದ ಪಿತಾಮಹನೆನಿಸಿದ್ದಾನೆ. ಅವನ ಅಭಿಪ್ರಾಯದಂತೆ ಚಿಕ್ಕ ಮಗುವಿಗೆ ಮೊದಲು ತನ್ನ ದೇಹದ ಕಡೆಗೆ ಲಕ್ಷ್ಯ ವೇಧಿಸುತ್ತದೆ. ಮನುಷ್ಯನು ಜಗತ್ತಿ

ನಲ್ಲಿ ಹುಟ್ಟಿ ಹೊಟ್ಟೆ ಮೊದಲು ತನ್ನನ್ನು ತಾನರಿಯಬೇಕೆಂದು ನಿಸರ್ಗನಿಯಮವಿದ್ದಂತೆ ತೋರುತ್ತದೆ. ಆತ್ಮಜ್ಞಾನದ ಪೀಠಿಕೆಯು ಇಲ್ಲಿಂದಲೆ ಪ್ರಾರಂಭ. ಮಗುವು ಮೊಲೆಯುಂಡು ತೃಪ್ತವಾಯಿತೆಂದರೆ ಅದರ ಮುಖ್ಯ ಕಲಸ ತನ್ನೊಡನೆ ತಾನಾಡಿಕೊಳ್ಳುವುದಾಗಿದೆ. ಮಲಗಿದಾಗ ತನ್ನ ಪುಟ್ಟ ಕೈಗಳನ್ನು ಬಡಿಯುಕೊಳ್ಳುತ್ತ ಅಂದವಾಗಿ ತಿರುಗಿಸುತ್ತ ವಿಶಾಲವಾಗಿ ತೆರೆದ ಕಂಗಳಿಂದ ಅವನ್ನು ನೋಡುತ್ತಿರುತ್ತದೆ. ತನ್ನ ಚಲನಶಕ್ತಿಗಳಿಂದ ತಾನೇ ಅಚ್ಚರಿಗೊಳುತ್ತದೆ. ತನ್ನ ಕೈ ಕಾಲುಗಳನ್ನು ತಾನೆ ಅಪ್ಪುತ್ತದೆ; ಮುದ್ದಿಡುತ್ತದೆ; ಚೀಪುತ್ತದೆ. ಮತ್ತು ಆನಂದದಿಂದ ವಿಚಿತ್ರವಾದ ಧ್ವನಿಗಳನ್ನು ಹೊರಡಿಸುತ್ತದೆ. ಒಟ್ಟಿನಲ್ಲಿ ತನ್ನನ್ನು ತಾನು ಪ್ರೀತಿಸಲಾರಂಭಿಸುತ್ತದೆ. ಸುಮಾರು ಆರು ವರ್ಷಗಳವರೆಗೆ ಆ ಆತ್ಮಪ್ರೇಮವು ಪ್ರಕಟವಾಗುತ್ತದೆ. ಆ ಪ್ರೇಮದಲ್ಲಿ ಕಾಮದ ಅಂಶವೂ ಇದೆಯೆಂದು ಫ್ರಾಯಿಡ್ ಮೊದಲಾದ ಕಾಮವಿಜ್ಞಾನಿಗಳ ಅಭಿಪ್ರಾಯವಾಗಿದೆ. ಆದ್ದರಿಂದ ಆ ಸ್ವಪ್ರೀತಿಗೆ ಅವರು 'ಸ್ವರತಿ' (Auto erotism) ಅಂದರೆ ತನ್ನಲ್ಲಿ ತಾನು ಆನಂದಪಟ್ಟುಕೊಳ್ಳುವ ಪ್ರವೃತ್ತಿಯೆಂದು ಹೆಸರಿಟ್ಟಿದ್ದಾರೆ. ಈ ವಿಷಯವನ್ನು ಮುಂದಿನ ಪ್ರಕರಣದಲ್ಲಿ ವಿಶದವಾಗಿ ಯೋಚಿಸುವಾ.

ಶೈಶವವನ್ನು ದಾಟಿದ ನಂತರ ಮಗುವು ಬಾಲ್ಯಾವಸ್ಥೆಯಲ್ಲಿ ಕಾಲಿಡುತ್ತದೆ. ಆರರಿಂದ ಸುಮಾರು ಹದಿನಾಲ್ಕು ವರ್ಷಗಳವರೆಗೆ ಬಾಲ್ಯಾವಸ್ಥೆಯಿರುವದು. ಶೈಶವದಲ್ಲಿ ತನ್ನನ್ನು ಪೂರ್ಣವಾಗಿ ಕಂಡುಕೊಂಡ ಶಿಶುವು ಬಾಲ್ಯಾವಸ್ಥೆಯಲ್ಲಿ ತನ್ನಂತಿರುವವರ ಕಡೆಗೆ ಹೊರಳುತ್ತದೆ. ಹುಡುಗರು ಹುಡುಗರೊಡನೆ, ಹುಡುಗಿಯರು ಹುಡುಗಿಯರೊಡನೆ ಸಲಿಗೆಯನ್ನು ಬೆಳೆಸುತ್ತಾರೆ. ಈ ಅವಸ್ಥೆಯಲ್ಲಿ ಗಂಡು ಹುಡುಗನು ತನ್ನ ಅಕ್ಕ ತಂಗಿಯರಿಗಿಂತ ಗೆಳೆಯರನ್ನು ಹೆಚ್ಚಾಗಿ ಪ್ರೀತಿಸುತ್ತಿರುವುದು ವ್ಯಕ್ತವಾಗುತ್ತದೆ. ಮನೆಯಲ್ಲಿಯ ಹುಡುಗ ಹುಡುಗಿಯರಿಗೆ ಬಾಲ್ಯಾವಸ್ಥೆಯಲ್ಲಿ ಜಗಳ, ಹೊಟ್ಟೆಕಿಚ್ಚುಗಳು ಹೆಚ್ಚಾಗಿರುವುದು ಎಲ್ಲರ ಅನುಭವದ ಮಾತಾಗಿದೆ. ಯಾವನಾದರೂ ಹುಡುಗನು ಈ ವಯಸ್ಸಿನಲ್ಲಿ ಹುಡುಗಿಯರ ಜೊತೆಗೆ ಆಡಹೋದರೆ ಅವನನ್ನು 'ಹೆಂಣ್ಯಾ' ಎಂದೂ ಹುಡುಗರೊಡನೆ ಆಡುವ ಹುಡುಗಿಯರಿಗೆ 'ಗಂಡುರಾಮಿ' ಎಂದೂ ಚೇಷ್ಟೆ ಮಾಡುವದನ್ನು ನಾವು

ಬಲ್ಲೆವು. ಪರಿಸ್ಥಿತಿಯ ಪ್ರಭಾವವು ವಿಪರೀತವಾಗಿರದಿದ್ದರೆ ಬಾಲ್ಯಾವಸ್ಥೆಯಲ್ಲಿ ಮಕ್ಕಳು ಸ್ವಜಾತಿ ಪ್ರೇಮಿಗಳಾಗಿರುತ್ತಾರೆ. ಶೈಶವದಲ್ಲಿ ತನ್ನನ್ನೆ ತಾನು ಪ್ರೇಮಿಸಿ 'ಸ್ವರತ' ವೆನಿಸಿದ ಮಗುವು ಬಾಲ್ಯಾವಸ್ಥೆಯಲ್ಲಿ ಸ್ವಜಾತೀಯ ವ್ಯಕ್ತಿಗಳನ್ನು ಪ್ರೇಮಿಸಲಾರಂಭಿಸಿ 'ಸಮರತ' (Homosexual) ಪ್ರವೃತ್ತಿಯುಳ್ಳದ್ದಾಗುವುದೆಂದು ಫ್ರಾಯಿಡನು ಹೇಳುತ್ತಾನೆ. ಇಲ್ಲಿಯೂ ಸಂಭೋಗಕಾಂಕ್ಷೆಯಿರುವದಿಲ್ಲ.

ಬಾಲ್ಯಾವಸ್ಥೆಯನ್ನು ದಾಟಿದ ಹುಡುಗ ಹುಡುಗಿಯರು ಕೌಮಾರಾವಸ್ಥೆಯಲ್ಲಿ ಪ್ರವೇಶಿಸುತ್ತಾರೆ. ಈವರೆಗೆ ಸ್ವಜಾತೀಯ ವ್ಯಕ್ತಿಗಳನ್ನೆ ಪ್ರೇಮಿಸಿ ಅವರೊಡನೆ ಸಾಗಿಸಿದ ಆಟಪಾಟಗಳಿಂದ ಆನಂದಪಟ್ಟು ಜಗತ್ತನ್ನು ಮರೆಯುತ್ತಿದ್ದ ಹುಡುಗ ಹುಡುಗಿಯರಿಗೆ ಕೌಮಾರಾವಸ್ಥೆಯಲ್ಲಿ ವಿಜಾತೀಯ ವ್ಯಕ್ತಿಗಳ ಕಡೆಗೆ ಮೆಲ್ಲಗೆ ದೃಷ್ಟಿ ಹರಿಯುತ್ತದೆ. "ನಾನೇ ಶ್ರೇಷ್ಠ; ಹುಡುಗರೇ ಜಗತ್ತಿಗೆ ಆಧಾರ; ಹುಡುಗರೇ ಬಾಳಿನಲ್ಲಿಯ ಸವಿ;" ಎಂಬ ಕನಸಿನಲ್ಲಿ ನಾಗಿದ ಬಾಲಕರಿಗೆ ಈಗ ಏಕೋ ಕುಮಾರಿಯರ ಕಡೆಗೆ ಕಂಣು ಹೊರಳುತ್ತದೆ. ಅಡಿಗೆ, ರಂಗವಲ್ಲಿ, ಮದುವೆಗಳ ಆಟವನ್ನಾಡಿ ಹುಡುಗಿಯರೊಡನೆಯೆ ಯಾವಾಗಲೂ ಗಂಗೆ, ಗೌರಿ, ಅರಿಸಿಣ, ಕುಂಕುಮ ಮುಂತಾದ ಚಟುವಟಿಕೆಗಳಲ್ಲಿ ಮೈಮರೆದ ಬಾಲಿಕೆಯರು ಈಗ ಕುಮಾರರ ಕಡೆಗೆ ದೃಷ್ಟಿ ನೀಡುವರು. ತಾವೇ ತಾವಾಗಿದ್ದ ಹುಡುಗ ಹುಡುಗಿಯರಿಗೆ ಈಗ ಜಗದಲ್ಲಿ ಆಕರ್ಷಕವಾದ ಮತ್ತೊಂದು ಜೀವಿಯು ಉದಯವಾದಂತೆ ಎನಿಸುವದು. ಅವರಿಗೆ ಕ್ರಮೇಣ ಪರಸ್ಪರರಲ್ಲಿ ಒಂದು ಮನದ ಎಳೆತದ ಅನುಭವವಾಗುವದು. 'ಹೆಂಣೆಂ' ದು ತಿರಸ್ಕರಿಸುತ್ತಿದ್ದ ಹುಡುಗಿಯನ್ನು ಕುಮಾರನು ಈಗ 'ಸುಂದರಿ' ಯೆಂದು ದಿಟ್ಟಿಸಹತ್ತುವನು. ಕುಮಾರಿಯೂ ಅವನನ್ನು ಪ್ರೀತಿಯಿಂದ ನೋಡುವಳು. 'ಸಮರತಿ' ಯ ಸೆಳವಿನಲ್ಲಿ ತೇಲುತ್ತಿದ್ದ ಬಾಲಬಾಲಿಕೆಯರಿಗೆ ಕೌಮಾರಾವಸ್ಥೆಯಲ್ಲಿ ದೂರದಲ್ಲಿ 'ಪ್ರತಿರತಿ' ಯ (ಭಿನ್ನ ಲಿಂಗಿಗಳಲ್ಲಿಯ ಪ್ರೀತಿ) ಸುಂದರ ದ್ವೀಪವು ಕಂಗೊಳಿಸುವದು. ವರುಷಗಳು ದಾಟಿದ ಹಾಗೆ ಆ ನಂದನ ದ್ವೀಪವು ಹತ್ತಿರ ಹತ್ತಿರ ಬರುವದು. ಪ್ರತಿರತಿಯು ಬೆಳೆಯುತ್ತ ಹೋಗುವದು. ಕೊನೆಗೊಮ್ಮೆ, ಯೌವನಾವಸ್ಥೆಗೇರಿ ಕುಮಾರ ಕುಮಾರಿಯರು ಪೂರ್ಣ 'ಪ್ರತಿರತ'

(Heterosexual) ರಾಗುವರು. ಕೌಮಾರಾವಸ್ಥೆಯಲ್ಲಿ ಭಿನ್ನ ದೇಹಗಳಲ್ಲಿ ಆಕರ್ಷಿಸಲ್ಪಡುತ್ತಿದ್ದ ಹುಡುಗ ಹುಡುಗಿಯರ ಮನಸ್ಸುಗಳು ಯೌವನಾವಸ್ಥೆಯಲ್ಲಿ ಏಕಮೇವಾದ್ವಿತೀಯವಾಗಲು ಹವಣಿಸಿ ಒಂದಾಗುವವು. ಸುಮಾರು ೨೦–೨೧ ನೇ ವರ್ಷದಲ್ಲಿ ಯುವಾವಸ್ಥೆಯು ವಿಕಾಸವಾಗುವದು. ಅಲ್ಲಿಗೆ ನಿರ್ಬುದ್ಧವಾದ ಕೂಸು ಶೈಶವ, ಬಾಲ್ಯ, ಕೌಮಾರಗಳೆಂಬ ಮೂರು ಅವಸ್ಥೆಗಳನ್ನು ದಾಟಿ ಪೂರ್ಣ ಮನುಷ್ಯನಾದಂತಾಯಿತು. ಇದೀಗ ಮನುಷ್ಯನು ನೈಸರ್ಗಿಕವಾಗಿ ವಿಕಾಸಹೊಂದುವ ಕ್ರಮವಾಗಿದೆ.

ಈ ಕ್ರಮುವನ್ನನುಸರಿಸಿದ ಜೀವನವೆ ಸ್ವಸ್ಥ ಜೀವನ. **ಶೈಶವದಲ್ಲಿ 'ಸ್ವರತಿ' ಯ ಪ್ರಾಬಲ್ಯ; ಬಾಲ್ಯದಲ್ಲಿ ಸಮರತಿಯ ಪ್ರಕಾಶ; ಕೌಮಾರದಲ್ಲಿ ಪ್ರತಿರತಿಯ ಸ್ಫುರಣ; ಯೌವನದಲ್ಲಿ ಪ್ರತಿರತಿಯ ಸಂಸ್ಥಾಪನೆ.** ಹೀಗೆ ಕ್ರಮದಲ್ಲಿ ಯಾರ ಬಾಳು ಅರಳುತ್ತ ಬಂದಿದೆಯೋ ಅವರ ಜೀವನ ಪ್ರವಾಹವು ನಿರಾತಂಕವಾಗಿ ಸಾಗಿದೆಯೆನ್ನಬೇಕು. ಅದು ಹಾಗೆಯೆ ಸಾಗುತ್ತ ಮಾನವ್ಯದ ಮಹಾಸಾಗರದಲ್ಲಿ ಲೀನವಾಗುವದು. ಕೌಮಾರಾವಸ್ಥೆಯಲ್ಲಿ ಹುಡುಗ ಹುಡುಗಿಯರ ಪ್ರೇಮದ ಅಧಿಷ್ಠಾನವು ನೈಸರ್ಗಿಕವಾಗಿ ಸ್ವಜಾತೀಯ ವ್ಯಕ್ತಿಗಳಿಂದ ವಿಜಾತೀಯ ವ್ಯಕ್ತಿಯ ಕಡೆಗೆ ಹರಿಯಬೇಕು. ಯುವಾವಸ್ಥೆಯಲ್ಲಿ ತರುಣ ತರುಣಿಯರು ಪೂರ್ಣ ಪ್ರತಿರತರಾಗಬೇಕು. ಈ ಕ್ರಮಪ್ರಗತಿಗೆ ವ್ಯತ್ಯಯವೆಲ್ಲಿ ಬಂದಿದೆಯೋ ಅಲ್ಲಿ ದೇಹಮನಸ್ಸುಗಳಲ್ಲಿ ಅನಾರೋಗ್ಯವುಂಟಾಗಿರಲೇಬೇಕು. ಹದಿನಾಲ್ಕು ಹದಿನೈದನೆ ವರ್ಷದ ನಂತರ ಹುಡುಗನು ಹುಡುಗರನ್ನೆ ಪ್ರೇಮಿಸಿದರೆ ಅವನ ಪ್ರಗತಿಯು ತಡೆದಿದೆ; ಅವನಿನ್ನೂ ಸಮರತನಾಗಿದ್ದಾನೆ ಎಂದು ಸಂಶಯ ಬರದಿರದು. ಕುಮಾರನು ಜಗತ್ತನ್ನೆ ಮರೆತು ತನ್ನನ್ನೆ ಪ್ರೀತಿಸಿದರೆ, ಅವನ ಆನಂದಕೇಂದ್ರವು ಜಗತ್ತಿನಲ್ಲಿಯ ಮಿಕ್ಕ ವಸ್ತುಗಳಲ್ಲಿ ಕುಮಾರಿಯರಲ್ಲಿ ಇರದೆ ತನ್ನಲ್ಲಿ ಉಳಿದುಕೊಂಡು ಬಿಟ್ಟರೆ ಅವನಿಗೆ ಕುಮಾರನ ವಯಸ್ಸಾಗಿದ್ದರೂ ಅವನಿರುವದು ಶೈಶವದಲ್ಲಿಯೆ ಎಂದು ವ್ಯಕ್ತವಾಗುವದು. ಅವನ ರತಿಯು ಪ್ರತಿಲಿಂಗಿಗಳಲ್ಲಿ (ಕುಮಾರಿಯರಲ್ಲಿ) ಇರದೆ ತನ್ನಲ್ಲಿ ಬೇರೂರಿಬಿಟ್ಟಿದೆ. ಅವನು ಪ್ರತಿರತನಾಗಲಿಲ್ಲ; ಸ್ವರತನಾಗಿಯೆ

ಉಳಿದುಬಿಟ್ಟನು. ಆದ್ದರಿಂದ 'ಸ್ವರತಿ' ಯು ಅವನ ಬೆಳಿಗೆಯಾಗದಿದ್ದುದರ ಲಕ್ಷಣವಾಗಿದೆ. ಕುಮಾರಿಯಲ್ಲಿಯೂ ಇದೆ ಅಕ್ರಮವು ತೋರಿ ಬಂದರೆ ಅವಳೂ ಸ್ವರತಿಯಲ್ಲಿಯೆ ಉಳಿದುಬಿಟ್ಟಿದ್ದಾಳೆ ಎಂದು ಹೇಳಬಹುದು. ಸಾರಾಂಶ ಮನುಷ್ಯನು ಶೈಶವದಿಂದ ಬೆಳೆಯುತ್ತಹೋದಂತೆ ಅವನ ಸೌಖ್ಯಾಕರ್ಷಣಗಳು ಪ್ರತಿಲಿಂಗಿಗಳ ಕಡೆಗೆ ಹರಿದುಹೋಗಬೇಕು. ಹಾಗಿಲ್ಲದೆ ತನ್ನಲ್ಲೆ ತಾನು ಸುಖಪಟ್ಟುಕೊಳ್ಳುವ ಪ್ರವೃತ್ತಿಯುಂಟಾದರೆ ಅದಕ್ಕೆ 'ಸ್ವರತಿ' ಯೆನ್ನುತ್ತಾರೆ.

ಜಾಣರಾದ ವಾಚಕರಿಗೆ ಈಗಾಗಲೆ ನಾವು ಈ ಪುಸ್ತಕಕ್ಕೆ 'ಸ್ವರತಿ' ಯೆಂದು ಹೆಸರಿಟ್ಟುದರ ಮರ್ಮವು ತಿಳಿದಿರಬೇಕು. ಹಸ್ತಪ್ರಯೋಗವಾಗಲಿ ಅಥವಾ ಸ್ವೋದ್ರೇಕದ ಯಾವುದೆ ಕ್ರಮವಾಗಲಿ ತರುಣ ತರುಣಿಯರು ನೈಸರ್ಗಿಕವಾಗಿ ಬೆಳೆದು ಪರಸ್ಪರರನ್ನು ಕಾಮಿಸುವ ಬದಲು ತಮ್ಮನ್ನು ತಾವೆ ಕಾಮಿಸುತ್ತಿರುವುದರ ಲಕ್ಷಣವಾಗಿದೆ. **ತನ್ನನ್ನು ತಾನು ಕಾಮಿಸುವುದು ಇಲ್ಲವೆ ತನ್ನ ಕಾಮತೃಪ್ತಿಗಾಗಿ ಪ್ರತಿಲಿಂಗಿ ವ್ಯಕ್ತಿಯನ್ನು ಅವಲಂಬಿಸದೆ ತನ್ನ ದೇಹವನ್ನೇ ಅವಲಂಬಿಸುವ ಗುಣಕ್ಕೆ ನಾವು ಸ್ವರತಿ ಯೆನ್ನುತ್ತೇವೆ.** ಇಂಗ್ರೇಜಿಯಲ್ಲಿ ಕೂಡ Masturbation ಎಂಬ ಶಬ್ದವು ಹಸ್ತಪ್ರಯೋಗ ಎಂಬಂತೆಯೆ ಪ್ರಚುರವಾಗಿದೆ. ಆದರೆ ಹಸ್ತಪ್ರಯೋಗದ ವ್ಯಾಪಕವಾದ ರೂಪಗಳನ್ನೆಲ್ಲ ಒಳಗೊಳ್ಳುವ ಶಬ್ದವನ್ನು ಹ್ಯಾವ್‌ಲೊಕ್ ಎಲಿಸನೆ ಇಂಗ್ರೇಜಿ ಸಾಹಿತ್ಯಕ್ಕೆ ಮೊಟ್ಟ ಮೊದಲು ಕೊಟ್ಟವನು. Autoerotism ಎಂಬುದೆ ಆ ಶಬ್ದವಾಗಿದೆ. ಸ್ವೋದ್ರೇಕ ಶೀಲತೆ ಎಂದು ಅದರ ಶಬ್ದಾರ್ಥ. ಪ್ರೊಫೆಸರ್ ಹರ್ಶಫೀಲ್ಡನು ಆ ಪ್ರವೃತ್ತಿಗೆ Ipsation ಎಂದು ಕರೆದಿದ್ದಾನೆ. ಅದರ ಅರ್ಥವೂ ಸ್ವಶರೀರವನ್ನು ಕಾಮತೃಪ್ತಿಯ ಕೇಂದ್ರವಾಗಿಸುವುದು ಎಂದಾಗುವದು. ಮರಾಟೆಯಲ್ಲಿ ಪ್ರೊ. ಕರ್ವೆ ಅವರು ಪ್ರಚುರಗೊಳಿಸಿದ 'ಸ್ವಸಂಭೋಗ' ಎಂಬುದೂ ಅದೇ ಅರ್ಥವುಳ್ಳದ್ದಾಗಿದೆ. ಆದರೂ ನಮ್ಮ ಅಭಿಪ್ರಾಯದಲ್ಲಿ ಅವೆಲ್ಲವೂ ಲಕ್ಷಣಗಳನ್ನು ಮಾತ್ರ ಸೂಚಿಸುವ ಶಬ್ದಗಳಾಗಿವೆ. ರತಿಯೆಂಬ ಶಬ್ದವು ಬಹು ಪ್ರಾಚೀನ ಕಾಲದ್ದು.

ಅದು ರತಿಕ್ರೀಡೆಯನ್ನೂ ಮಾನಸಿಕ ಆನಂದವನ್ನೂ ಸೂಚಿಸುತ್ತದೆ. ಕಾಮೋದ್ರೇಕವಾದಾಗ ಸ್ತ್ರೀಯು ಪುರುಷರಲ್ಲಿ ಮತ್ತು ಪುರುಷನು ಸ್ತ್ರೀಯರಲ್ಲಿ ರಮಿಸುವದಕ್ಕೆ 'ಪ್ರತಿರತಿ' ಯೆನ್ನುತ್ತಾರೆ. ತದ್ವಿರುದ್ಧವಾಗಿ ತಮ್ಮಲ್ಲೆ ತಾವು ರಮಿಸುವುದಕ್ಕೆ 'ಸ್ವರತಿ'ಯೆನ್ನುತ್ತಾರೆ.



# ಮೂರನೆಯ ಪ್ರಕರಣ



## ಬಾಲ್ಯಸ್ವರತಿ

ಹಿಂದಿನ ಪ್ರಕರಣದಲ್ಲಿ ಶೈಶವಾವಸ್ಥೆಯಲ್ಲಿ ಮಕ್ಕಳು ನೈಸರ್ಗಿಕವಾಗಿ ಸ್ವರತರಾಗಿರುತ್ತಾರೆ ಎಂಬುದನ್ನು ಓದಿ ವಾಚಕರು 'ಶೈಶವದಲ್ಲಿಯೂ ಕಾಮವಿರುತ್ತದೆಯೋ?' ಎಂದು ಆಶ್ಚರ್ಯದಿಂದ ಪ್ರಶ್ನಿಸಬಹುದು. ಮತ್ತೆ ಆ ಪ್ರಶ್ನೆಗೆ ಹೌದು ಎಂದು ನಾವು ಉತ್ತರಿಸಿದರೆ ಅವರ ಆಶ್ಚರ್ಯವು ಇನ್ನೂ ಹೆಚ್ಚಾಗಬಹುದು. ಆದರೆ ಕಾಮದ ನಿಜವಾದ ಸ್ವರೂಪವನ್ನು ತಿಳಿದವರಿಗೆ ಆ ಮಾತಿನಲ್ಲಿ ವಿಲಕ್ಷಣವೇನೂ ತೋರಲಾರದು. ಕಾಮವೆಂದರೆ ಸಂಭೋಗ ಲಾಲಸೆ ಎಂಬುದು ಸರ್ವಸಾಮಾನ್ಯವಾದ ತಿಳುವಳಿಕೆ. ಬಾಲ್ಯದಲ್ಲಿಯೂ ಶೈಶವದಲ್ಲಿಯೂ ಸಂಭೋಗಲಾಲಸೆಯಿಲ್ಲದಿರುವದರಿಂದ ಚಿಕ್ಕವರಲ್ಲಿ ಕಾಮವಿರಲಾರದು ಎಂಬುದು ಸಾಮಾನ್ಯರ ಊಹೆ. ಆದರೆ ಈ ವಿಚಾರಸರಣಿಯು ತಿರುವುಮುರುವಾಗಿದೆ. ಸಂಭೋಗವೊಂದೆ ಕಾಮವಿಕಾರವನ್ನು ತೃಪ್ತಿಗೊಳಿಸುವ ದಾರಿಯಲ್ಲ. ಕೆಲವು ವ್ಯಕ್ತಿಗಳಿಗೆ ಸಂಭೋಗವಿಲ್ಲದಿದ್ದರೂ ಬರಿ ಆಲಿಂಗನ ಚುಂಬನಗಳಿಂದಲೆ ಕಾಮತೃಪ್ತಿಯಾಗುವದುಂಟು. ಡಾ. ಸ್ಟೀಕೆಲ್‌ನು ಒಬ್ಬ ಸ್ತ್ರೀಯ ಉದಾಹರಣೆಯನ್ನು ಕೊಟ್ಟಿದ್ದಾನೆ. ಅವಳ ಗಂಡನು ಪೂರ್ವ ಪ್ರಣಯಗಳಿಲ್ಲದೆ ಒಮ್ಮೆಲೆ ಸಂಭೋಗಕ್ಕೆ ತೊಡಗುತ್ತಿದ್ದನು. ಆದರಿಂದ ಅವಳಿಗೆ ತೃಪ್ತಿಯಾಗದೆ ಗಂಡನ ವಿಷಯಕ್ಕೆ ದ್ವೇಷವು ಹುಟ್ಟಿಕೊಂಡಿತು. ಅವಳು ಒಂದು ಆಫೀಸಿನಲ್ಲಿ ಕಾರ್ಯದರ್ಶಿನಿಯಾಗಿದ್ದಳು. ಆ ಆಫೀಸಿನ ಒಡೆಯನು ಇಳಿವಯಸ್ಸಿನವನೂ ಸುದೃಢ ಶರೀರಿಯೂ

ಆಗಿದ್ದನು. ಅವನು ಎಂದಾದರೊಮ್ಮೆ ಅವಳನ್ನು ಬರಿ ಗಟ್ಟಿಯಾಗಿ ಆಲಿಂಗಿಸುತ್ತಿದ್ದನು. ಅವರಲ್ಲಿಯೆ ಅವಳಿಗೆ ಪೂರ್ಣರತಿಯ ಅನುಭವ ವಾಗುತ್ತಿತ್ತೆಂದು ಅವಳು ಹೇಳುತ್ತಿದ್ದಳು. ಇಂಥ ಉದಾಹರಣೆಗಳಿಂದ ಸಂಭೋಗಲಾಲಸೆಯು ಕಾಮವಿಕಾರದ ಹಲವು ಲಕ್ಷಣಗಳಲ್ಲಿ ಒಂದು ಲಕ್ಷಣ ಮಾತ್ರವಾಗಿದೆ ಎಂದು ಸಿದ್ಧವಾಗುವದು.

ಆದ್ದರಿಂದ ಸಂಭೋಗಲಾಲಸೆ ಇಲ್ಲದಿರುವದರಿಂದ ಮಕ್ಕಳಲ್ಲಿ ಕಾಮ ವಿಕಾರವೂ ಇಲ್ಲವೆಂದು ನಿರ್ಧರಿಸುವುದು ಯೋಗ್ಯವಲ್ಲ. ಪ್ರತಿಲಿಂಗಿಯ ಸ್ಪರ್ಶ, ಆಲಿಂಗನಗಳ ಅಪೇಕ್ಷೆಯುಂಟಾಗುವುದೂ ಕಾಮವಿಕಾರದ ಲಕ್ಷಣ ವಾಗಿದೆ. ಅಂಥ ಅಪೇಕ್ಷೆಗಳೂ ಶೈಶವದಲ್ಲಿ ವಿಶೇಷವಾಗಿ ಕಂಡುಬರುವದಿಲ್ಲ ವೆಂಬುದು ನಿಜ. ಆದರೂ ಆ ಅಪೇಕ್ಷೆಗಳುಳ್ಳ ಮಕ್ಕಳೂ ಅಲ್ಲಲ್ಲಿ ನೋಡ ಸಿಗುತ್ತವೆ. ಈಗ ಎಂಟು ವರ್ಷಗಳ ಹಿಂದ ನಾವೆ ಅಂಥ ಒಂದು ಸಂಗತಿ ಯನ್ನು ನೋಡಿದ್ದೇವೆ. ನಮ್ಮ ನೆರೆಮನೆಯ ೫ ವರ್ಷದ ಗಂಡು ಮಗುವನ್ನು ಪಕ್ಕದ ಮನೆಯ ಒಬ್ಬ ಬಾಲ ವಿಧವೆಯು ಬಹುವಾಗಿ ಪ್ರೀತಿಸುತ್ತಿದ್ದಳು. ಒಂದು ದಿನ ಆ ಮಗುವನ್ನು ಎದೆಯ ಮೇಲೆ ಕೂಡಿಸಿಕೊಂಡು ಅದರ ಇಂದ್ರಿಯದೊಡನೆ ಅವಳು ಆಟವಾಡುತ್ತಿದ್ದುದನ್ನೂ ಆಗ ಆ ಕೂಸಿನ ಇಂದ್ರಿಯವು ಉದ್ರೇಕಗೊಳ್ಳುವದನ್ನೂ ನಾವು ನೋಡಿದೆವು. ಮುಂದೆ ಕೆಲವೆ ದಿನಗಳಲ್ಲಿ ಆ ಕೂಸು ೭ ವರ್ಷದ ಹುಡುಗಿಯ ಹೊಟ್ಟೆಯ ಮೇಲೆ ಕೂತು ಆ ಚೇಷ್ಟೆಯನ್ನು ಮಾಡಿಕೊಳ್ಳುತ್ತಿದ್ದುದೂ, ಆ ಹುಡುಗಿಯು ಬಿಡಿಸಿ ಕೊಂಡು ಹೋಗಲು ಪ್ರಯತ್ನಿಸಿದಾಗ ಆ ಕೂಸು ರೇಗಿ ಅಳುತ್ತಿದ್ದುದೂ ನಮ್ಮ ನಿದರ್ಶನಕ್ಕೆ ಬಂತು. ಈ ವಿಷಯವನ್ನು ಆ ಕೂಸಿನ ತಂದೆಗೆ ತೋರಿಸಿ ಇದು ಆ ಬಾಲ ವಿಧವೆಯ ಚೇಷ್ಟೆಯಾಗಿರಬೇಕೆಂದು ಸೂಚಿಸಿದೆವು. ಆ ತಂದೆಗೆ ಆಗ ಬಹುಶಃ ನಾವೆ ಹುಚ್ಚರೆಂದು ಅನಿಸಿರಬಹುದು. ಈ ಸಂಗತಿ ಯನ್ನು ನೋಡಿದ ಮೇಲೆ ವಿವಿಧ ಕಾಮವಿಜ್ಞಾನಿಗಳು ಬಾಲ್ಯಕಾಮದ ವಿಷಯಕ್ಕೆ ಹೇಳುತ್ತಿದ್ದ ಕಥೆಗಳು ಸುಳ್ಳಲ್ಲವೆಂದು ನಮಗೆ ಮನವರಿಕೆಯಾ ಯಿತು.

ಇಲ್ಲಿ ನಾವು ಜೀವಶಾಸ್ತ್ರದ ಒಂದು ತತ್ವವನ್ನು ತಿಳಿದುಕೊಳ್ಳಬೇಕು. ಮನುಷ್ಯನಲ್ಲಾಗಲಿ, ವಿಶ್ವದಲ್ಲಾಗಲಿ ನಾಟಕದಲ್ಲಿಯ 'ಕಟ್ ಸೀನರಿ' ಗಳಂತೆ

ಒಮ್ಮೆಲೆ ಯಾವ ಮಾರ್ಪಾಡೂ ಉಂಟಾಗಲಾರದು. ಪ್ರತಿಯೊಂದು ಜೀವಿಯಲ್ಲಿಯೂ ತೀರ ಕಸುವುಳ್ಳ ಎರಡು ವೇಗಗಳಿವೆ. ಒಂದು ಜೀವ ಧಾರಣದ ವೇಗ; ಇನ್ನೊಂದು ಸಂತಾನೋತ್ಪತ್ತಿಯ ವೇಗ. ಜೀವಧಾರಣೆಯ ವೇಗವು, ಹುಟ್ಟಿದ ಕ್ಷಣದಿಂದ ಹಸಿವೆಯ ರೂಪದಲ್ಲಿ ವ್ಯಕ್ತವಾಗುತ್ತದೆಂಬುದು ಎಲ್ಲರಿಗೂ ಗೊತ್ತಿದೆ. ಸಂತಾನೋತ್ಪತ್ತಿಯ ವೇಗವು ಮಾತ್ರ ಕಾಮವಿಕಾರದ ರೂಪದಲ್ಲಿ ಒಮ್ಮೆಲೆ ತಾರುಣ್ಯದಲ್ಲಿ ವ್ಯಕ್ತವಾಗುವದೆಂದು ಸಾಮಾನ್ಯ ತಿಳುವಳಿಕೆಯಾಗಿದೆ. ದೇಹ ಮನಸ್ಸುಗಳಲ್ಲಿ ಮೊದಲು ಇಲ್ಲದುದು ಹರೆಯದಲ್ಲಿ ಒಮ್ಮೆಲೆ ಆಕಾಶದಿಂದ ಬಿತ್ತೆಂಬುದು ತರ್ಕಶುದ್ಧವಾದ ಅಭಿಪ್ರಾಯವಾಗಲಾರದು. ಪ್ರಕೃತಿಯು ಜೀವನದಲ್ಲಿಯ ಯಾವುದೊಂದು ವೃತ್ತಿಯನ್ನು ಬಲು ಸೂಕ್ಷ್ಮವಾಗಿ ಗುಪ್ತವಾಗಿ ಕಟ್ಟುತ್ತ ಹೋಗಿ ಅದನ್ನು ಸಕಾಲದಲ್ಲಿ ಪ್ರವೃತ್ತಿಯ ರೂಪದಲ್ಲಿ ಅರಳಿಸುವಳೆಂದು ಹಿಂದಿನ ಪ್ರಕರಣದಲ್ಲಿ ವಿವೇಚಿಸಿದ್ದೇವೆ. ಆದ್ದರಿಂದ ಕಾಮವೆಂದರೆ ತಾರುಣ್ಯದಲ್ಲಿ ಅಷ್ಟೆ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಕಂಡುಕೊಳ್ಳುವ ಜೀವನಾಕಾಶದ ಉಲ್ಕಾಪಾತವಲ್ಲ. 'ಕಾಮ' ದ ಸರಿಯಾದ ಅರ್ಥವನ್ನು ತಿಳಿದುಕೊಂಡರೆ ಈ ವಿಷಯವು ಹೆಚ್ಚು ತಿಳಿಯಾಗುವದು.

**ಶ್ರೋತ್ರ ತ್ವಕ್ ಚಕ್ಷುರ್ಜಿಹ್ವಾಘ್ರಾಣಾನಾಮಾತ್ಮ ಸಂಯುಕ್ತೇನ ಮನಸಾಧಿಷ್ಠಿತಾನಾಂ ಸ್ವೇಷು ಸ್ವೇಷು ವಿಷಯೇಷ್ವಾನುಕೂಲ್ಯತಃ ಪ್ರವೃತ್ತಿಃ ಕಾಮಃ,** ಎಂದರೆ ಪಂಚೇಂದ್ರಿಯಗಳು ಮನಸ್ಸಿನ ಮೂಲಕ ತಮ್ಮ ತಮ್ಮ ಸುಖ ವಿಷಯಗಳಲ್ಲಿ ಪ್ರವರ್ತಿಸುವದಕ್ಕೆ **ಕಾಮ** ಎಂದು ವಾತ್ಸ್ಯಾಯನ ಎಂಬ ಪ್ರಾಚೀನ ಕಾಮವಿಜ್ಞಾನಿಯು ಹೇಳಿದ್ದಾನೆ. ಈ ವ್ಯಾಖ್ಯೆಗನುಸರಿಸಿ ಜೀವಿಯ ಜನ್ಮದಾರಭ್ಯ ಪ್ರತಿಯೊಂದು ಪ್ರವೃತ್ತಿಯೂ ಕಾಮವೆನಿಸುವದು. ಸುಖವಿದ್ದೆಡೆಗೆ ಆಕರ್ಷಣವೂ ದುಃಖವಿದ್ದೆಡೆಗೆ ವಿಕರ್ಷಣವೂ ಪ್ರತಿಯೊಂದು ಜೀವಿಗೆ ನೈಸರ್ಗಿಕವಾಗಿದೆ. ಮತ್ತು ಜೀವಿಗಳ ಮೂಲ ಸುಖವು ಹಸಿವು ಮತ್ತು ಕಾಮ ಎಂಬ ಎರಡೇ ವೇಗಗಳ ತೃಪ್ತಿಯಲ್ಲಿದೆ. ಆದ್ದರಿಂದ ಹಸಿವು ಹಿಂಗಿದ ನಂತರ ಪಂಚೇಂದ್ರಿಯಗಳ ಸುಖದ ಶೋಧವು ಕಾಮಪೂರ್ತಿಗಾಗಿಯೆ ಇರುವುದೆಂದು ಸಿದ್ಧವಾಗುವದು. ಸಾಮಾನ್ಯರು ಒಂದು ವಿಶಿಷ್ಟ ವಯಸ್ಸಿನಲ್ಲಿ ಕಾಮವಿಕಾರವಿರುವದಿಲ್ಲವೆನ್ನು

ತ್ತಾರೆ. ಅದು ನಿಜವಾಗಿದ್ದರೆ ಆ ಪ್ರಾಣಿಗೆ ಹೊಟ್ಟೆ ತುಂಬಿದ ಕೂಡಲೆ ಪಂಚೇಂದ್ರಿಯಗಳು ಸ್ತಬ್ಧವಾಗಿರಬೇಕು. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಹೊಟ್ಟೆ ತುಂಬಿದ ನಂತರ ಪಂಚೇಂದ್ರಿಯಗಳ ಸುಖದ ಬೋಧವು ಹೆಚ್ಚಾಗುವುದಲ್ಲದೆ ಕಡಿಮೆಯಾಗುವದಿಲ್ಲ. ಚಿಕ್ಕ ಕೂಸುಗಳು ಕೂಡ ಸುಮ್ಮನೆ ಮಲಗಿಕೊಳ್ಳುವದಿಲ್ಲ. ನಿದ್ರಿಸದಿರುವ ಹೊತ್ತಿನಲ್ಲೆಲ್ಲ ಅವು ತಮ್ಮ ಅಂಗಾಂಗಗಳ ಮತ್ತು ಪಂಚೇಂದ್ರಿಯಗಳ ಸುಖದಾಯಕವಾದ ಪ್ರವೃತ್ತಿಯನ್ನು ನಡೆಸುತ್ತಲೆ ಇರುತ್ತವೆ. ಹಸಿವು ಮತ್ತು ಕಾಮ ಎಂಬ ಎರಡೆ ಪ್ರಬಲವಾದ ವೇಗಗಳು ಎಂಬ ಜೀವಶಾಸ್ತ್ರದ ಮಾತು ನಿಜವಾಗಿದ್ದರೆ ಮೇಲಿನ ವಿವೇಚನೆಯಿಂದ ಆದೆ ಹುಟ್ಟಿದ ಕೂಸಿನಲ್ಲಿ ಕೂಡ ಕಾಮವಿದೆ ಎಂಬ ತತ್ವವನ್ನು ಅಲ್ಲಗಳೆಯಲಾಗದು.

ಮೇಲಿನ ತತ್ವವನ್ನು ಮನವರಿತೇ **ಆನಂಗಾದೇವ ಇಮಾನಿ ಜೀವಾನಿ ಜಾಯಂತೆ, ಅನಂಗಾದೇವ ಜಾತಾನಿ ಜೀವಂತಿ, ಆನಂಗಮೇವ ಪ್ರತ್ಯಭಿಸಂವಿಶಂತಿ,** ಅಂದರೆ ಕಾಮದಿಂದಲೆ ಜೀವಿಗಳು ಹುಟ್ಟುವವು, ಕಾಮದಿಂದಲೆ ಹುಟ್ಟಿದವು, ಬಾಳುವವು ಮತ್ತು ಕೊನೆಗೆ ಕಾಮದಲ್ಲಿಯೆ ಲೀನವಾಗುವವು ಎಂಬ ಭಾರತೀಯ ಜ್ಞಾನವಚನವನ್ನು ಫ್ರಾಯಿಡ್ ಎಂಬ ವಿಜ್ಞಾನಿಯು, ಪ್ರತ್ಯಕ್ಷ ಪ್ರಯೋಗಗಳಿಂದ ಸಿದ್ಧಪಡಿಸಿ 'ಮನೋವಿಶ್ಲೇಷಣ' ಎಂಬ ಹೊಸ ಶಾಸ್ತ್ರವನ್ನು ನಿರ್ಮಿಸಿದನು. ವಸ್ತುತಃ ವಾತ್ಸ್ಯಾಯನ ಮಹರ್ಷಿಯ ಕಾಲದಲ್ಲಿಯೆ ಆ ಶಾಸ್ತ್ರವು ಉದಯವಾಗಿತ್ತೆಂಬುದು ಮೇಲಿನ 'ಕಾಮ'ದ ಸಂಸ್ಕೃತ ವ್ಯಾಖ್ಯೆಯಿಂದಲೆ ತಿಳಿಯುವಂತಿದೆ. ಈಗ ಶೈಶವದಲ್ಲಿ ಕಾಮವಿದೆಯೆಂಬುದನ್ನು ವಾಚಕರು ಒಪ್ಪಿದರೂ ಅದನ್ನು ಯಾವ ಚಿಹ್ನೆಗಳಿಂದ ಗುರುತಿಸಬೇಕೆಂದು ಕೇಳಬಹುದು.

ಕಾಮವೆಂಬುದು 'ಕಮ್' ಎಂಬ ಮೂಲ ಶಬ್ದದಿಂದ ಹುಟ್ಟಿದೆ. ಕಮ್ ಅಂದರೆ ಪ್ರೀತಿಸು ಎಂಬರ್ಥ. ಆದ್ದರಿಂದ ಪ್ರೀತಿಯನ್ನು ಹುಟ್ಟಿಸುವ ಪ್ರವೃತ್ತಿಗಳೆಲ್ಲ ಕಾಮಪ್ರವೃತ್ತಿಗಳೆನ್ನಬಹುದು. 'The tendency to seek pleasurable sensations which at first sight seems to be free from any erotic element but which as it develops, clearly assumes a sexual character' ಎಂದರೆ ಮೊದಲು ಕಾಮಕ್ಕೇನೂ ಸಂಬಂಧವಿಲ್ಲದಂತೆ ತೋರಿದರೂ ಕ್ರಮೇಣ ಕಾಮಸ್ವಭಾವದಲ್ಲಿ ಮಾರ್ಪಡುವ, ಸುಖ

ಸಂವೇದನೆಗಳನ್ನು ಪಡೆಯುವ ಒಲವೇ ಮಕ್ಕಳಲ್ಲಿಯ ಕಾಮುದ ಲಕ್ಷಣವೆಂದು ಎನ್ ಸೈಕ್ಲೊಪೀಡಿಯಾ ಆಫ್ ಸೆಕ್ಸುಅಲ್ ನೊಲೆಜ್ ಎಂಬ ಗ್ರಂಥವಲ್ಲಿ ಪಾಶ್ಚಾತ್ಯ ವಿಜ್ಞಾನಿಗಳ ಅಭಿಪ್ರಾಯಗಳನ್ನೆಲ್ಲ ಒಂದುಗೂಡಿಸಿ ಹೇಳಲಾಗಿದೆ. ಮಕ್ಕಳು ಯಾವ ಪ್ರವೃತ್ತಿಗಳಲ್ಲಿ ರಮಣೀಯವಾದ ಸುಖವನ್ನು ಅನುಭವಿಸುವವೋ ಮತ್ತು ಸಾಧ್ಯವಾದಾಗ ಆ ಸುಖಾನುಭವಗಳನ್ನು ಬೆಳೆಸಲು ಹಾಗೂ ಪುನಃ ಪುನಃ ಪಡೆಯಲು ಪ್ರವರ್ತಿಸುವವೋ ಆ ಪ್ರವೃತ್ತಿಗಳು ಬಾಲ್ಯಕಾಮುದ ಲಕ್ಷಣಗಳಾಗಿವೆ. ಏಕೆಂದರೆ ಅವೆ ಪ್ರವೃತ್ತಿಗಳು ಮುಂದೆ ಕಾಮಜೀವನದ ವಿಶಿಷ್ಟ ಕ್ರಿಯೆಗಳಲ್ಲಿ ರೂಪುಗೊಳ್ಳುತ್ತವೆ. ತರುಣ ತರುಣಿಯರು ಕಾಮಕ್ರೀಡೆಗೆ, ತಮ್ಮ ಪಂಚೇಂದ್ರಿಯಗಳಿಗೂ ಸುಖಸಂವೇದನೆಗಳನ್ನು ಕೊಡುವ ಪ್ರತಿಲಿಂಗಿ (Opposite sex) ವ್ಯಕ್ತಿಯನ್ನೆ ಹುಡುಕುತ್ತಾರೆ. ಮತ್ತು ಹಾಗೆ ಪ್ರಿಯ ಪ್ರಿಯೆಯರನ್ನು ಹುಡುಕುವಾಗ ಬಾಲ್ಯದಲ್ಲಿ ಪಂಚೇಂದ್ರಿಯಗಳಿಗಾಗಿರುವ ಸಂಸ್ಕಾರಗಳೆ ಅವರಿಗೆ ದಿಗ್ದರ್ಶಕವಾಗುವವು. ಹಾಗಾದರೆ ಬಾಲ್ಯದ ಪಂಚೇಂದ್ರಿಯಗಳ ಸುಖ ಪ್ರವೃತ್ತಿಗಳು ತಾರುಣ್ಯದ ಕಾಮಜೀವನದ ಬುನಾದಿಯಾದಂತಾಗಲಿಲ್ಲವೇ ? ಇದನ್ನು ಉದಾಹರಣೆಗಳಿಂದ ಸ್ಪಷ್ಟೀಕರಿಸುವಾ.

ಫ್ರಾಯಿಡನು ಅನ್ನುತ್ತಾನೆ " ತಾಯಿಯ ಮೊಲೆ ಕುಡಿದು ತೃಪ್ತವಾಗಿ ಕಣ್ಣೆಗಳು ಕೆಂಪೇರಿ ಮುಗಳುನಗೆಯನ್ನು ಬೀರುತ್ತ ನಿದ್ದೆಹೋಗುವ ಮಗುವನ್ನು ಕಂಡವರಿಗೆ ಅವೇ ಹಾವಭಾವಗಳು ಭಾವೀಜೀವನದಲ್ಲಿ ಕಾಮತೃಪ್ತಿಯ ರೂಪದಲ್ಲಿ ವ್ಯಕ್ತವಾಗುವವೆಂದು ಮನವರಿಕೆಯಾಗದಿರದು. " ಕಾಮಕ್ರೀಡೆಯಲ್ಲಿ ಚುಂಬನವು ನಿಶ್ಚಿತವಾದ ಕಾಮೋತ್ತೇಜನದ ಸಾಧನವಾಗಿದೆಯಲ್ಲವೇ ? ಅದಕ್ಕೆ ಕಾರಣವೇನೆಂದರೆ ಶೈಶವದಲ್ಲಿ ಮಗುವಿಗೆ ತಾಯಿಯ ತೃಪ್ತಿಸುಖ ಸಂವೇದನೆಗಳಿಂದ ಕೂಡಿದ ಮೊಲೆಯ ಸ್ಪರ್ಶದಿಂದ ತುಟಿಗಳು ಸಂಸ್ಕಾರ ಹೊಂದಿ ಬೆಳೆದ ನಂತರವೂ ಅವು ಉದ್ರೇಕದ ಕೇಂದ್ರಗಳಾಗುವವು. ಅಲ್ಲದೆ ನಮ್ಮ ದೇಹದಲ್ಲಿ ಬಾಹ್ಯ ಚರ್ಮವೂ ಒಳವ್ಮೈಯ ಚರ್ಮವೂ (ಶ್ಲೇಷ್ಮತ್ವಚೆಯೂ) ಸಂಧಿಸುವ ಸ್ಥಳಗಳಲ್ಲಿ—ತುಟಿ, ಗುದ, ಜನನೇಂದ್ರಿಯ, ಕಂಣು, ಕಿವಿ ಮುಂತಾದವುಗಳಲ್ಲಿ ನೈಸರ್ಗಿಕವಾಗಿ ಸುಖ ಸಂವೇದನೆಯ ಸ್ವಭಾವವಿರುತ್ತದೆ. ಮಗುವು ಶೈಶವದಲ್ಲಿ ಆತ್ಮಪ್ರೇಮ ಪ್ರಭಾವದಿಂದ ತನ್ನ

ದೇಹದ ವಿವಿಧಾಂಗಗಳನ್ನು ಕುತೂಹಲದಿಂದ ಸಂಶೋಧಿಸುತ್ತಿರುತ್ತದೆ. ಆ ಸಂಶೋಧನ ಕಾಲದಲ್ಲಿ ಅದಕ್ಕೆ ಯಾವ ಯಾವ ಅಂಗದಲ್ಲಿ ಸುಖವೆನಿಸುವುದೋ ಆ ಅಂಗವನ್ನು ಮೇಲಿಂದ ಮೇಲೆ ಮುಟ್ಟಿಕೊಳ್ಳುವ ಇಲ್ಲವೆ ಸುಖಕರವೆನಿಸುವಂತೆ ಆ ಅಂಗದೊಡನೆ ಆಡಿಕೊಳ್ಳುವ ಪ್ರವೃತ್ತಿಯು ಅದಕ್ಕುಂಟಾಗುತ್ತದೆ. ಮೊಲೆ ಕುಡಿಯುವುದರಿಂದ ಮಗುವಿನ ಹಸಿವು ಹಿಂಗುವುದು ನಿಜ. ಆದರೆ ಹಸಿವೆಯೊಡನೆ ಕಾಮವೂ ಹೆಣೆದುಕೊಂಡಿರುತ್ತದೆ. ಉದಾಹರಣಾರ್ಥ ಒಂದು ಮೊಲೆಯನ್ನು ಉಣುವಾಗ ಕೆಲವು ಮಕ್ಕಳು ತಾಯಿಯ ಮತ್ತೊಂದು ಮೊಲೆಯ ಮೇಲೆ ಸುಖಕರವಾಗಿ ಕೈಯಾಡಿಸುತ್ತಿರುತ್ತವೆ. ತಾಯಿಯು ಅದಕ್ಕೆ ಆಸ್ಪದ ಕೊಡದಿದ್ದರೆ ಮಕ್ಕಳು ರೇಗಿಕೊಳ್ಳುವದೂ ಉಂಟು. ತಾಯಿಯಿಲ್ಲದ ಮಗು ಅಥವಾ ಮೊಲೆ ಹಾಲು ಬಿಡಿಸಲ್ಪಟ್ಟ ಮಗುವು ಬಹಳವಾಗಿ ಅಳುತ್ತಿದ್ದರೆ ಮುದುಕಿಯರು ಅಥವಾ ವಿಧವೆಯರು ತಮ್ಮ ಬರಡುಮೊಲೆಯನ್ನು ಅದರ ಬಾಯಿಗೆ ಕೊಡುವರು. ಅದರಲ್ಲಿ ಹಾಲಿಲ್ಲದಿದ್ದರೂ ಅದನ್ನು ಚೀಪುವುದರಲ್ಲಿ ಮಗುವು ತೃಪ್ತಿಯನ್ನು ಹೊಂದುತ್ತದೆ. ಮಗುವು ೨-೩ ವರ್ಷಗಳವರೆಗೆ ತಾಯಿಯ ಮೊಲೆ ಕುಡಿದಿದ್ದರೆ ಅದು ತಾರುಣ್ಯದಲ್ಲಿ ಸ್ತನಪ್ರೇಮಿಯಾಗುತ್ತದೆಂದು ಮನಃಶಾಸ್ತ್ರವೆನ್ನುತ್ತದೆ. ತಾಯಿಯ ಮೊಲೆಯ ರೂಪ ಆಕಾರಗಳಂತೆ ಸ್ತನಗಳುಳ್ಳ ತರುಣಿಯನ್ನೆ ತರುಣರು ಕಾಮಿಸುವರು ಎಂದು ಡಾ. ಸ್ಟೀಕೆಲ್ಲನು ಅನ್ನುತ್ತಾನೆ. ಈ ತರ್ಕದಿಂದ ಬಾಲ್ಯದ ಸುಖ ಸಂವೇದನೆಗಳು ಮುಂದೆ ಕಾಮ ಪ್ರವೃತ್ತಿಯಲ್ಲಿ ಮಾರ್ಪಡುವವಾದ್ದರಿಂದ ಬಾಲ್ಯದಲ್ಲಿಯೂ ಅವುಗಳಲ್ಲಿ ಕಾಮವಡಗಿರಲೆಬೇಕೆಂದು ಸಿದ್ಧವಾಗುವದು.

ಮೊಲೆಯುಂಣದಿರುವ ಸಮಯಗಳಲ್ಲಿ ಮಗುವು ತನ್ನ ಕೈಯ ಇಲ್ಲವೆ ಕಾಲ ಹೆಬ್ಬೆರಳನ್ನು ಚೀಪುತ್ತ ಸುಖಪಡುತ್ತದೆಂಬುದು ಎಲ್ಲರಿಗೂ ಗೊತ್ತುಂಟು. ಹಾಗೆ ಚೀಪುತ್ತಿರುವಾಗಲೂ ಅದರ ಮುಖಮುದ್ರೆ ಕೆನ್ನೆಗಳ ಭಾವವು ಪೂರ್ಣವಾಗಿ ಕಾಮತೃಪ್ತಿಯ ಚಿತ್ರವಾಗಿರುತ್ತದೆಂದು ವಿಜ್ಞಾನಿಗಳೆನ್ನುತ್ತಾರೆ. ಕೆಲವು ಮಕ್ಕಳು ಬೇಕಾದಷ್ಟು ಕ್ರೂರವಾಗಿ ಶಿಕ್ಷಿಸಲ್ಪಟ್ಟರೂ ಬೆರಳು ಚೀಪುವುದನ್ನು ಬಿಡಲಾರವೆಂದರೆ ಅವಕ್ಕೆ ಆ ಪ್ರವೃತ್ತಿಯಲ್ಲಿ ಇರುವ ಸುಖದ ಅಂಶವೆಷ್ಟೆಂಬುದನ್ನು ಸುಲಭವಾಗಿ ಊಹಿಸಬಹುದು. ಮಿಕ್ಕ ಮಕ್ಕಳು ಮೂಗಿ

ನಲ್ಲಿ, ಕಿವಿಯಲ್ಲಿ ಬೆರಳನ್ನು ಹಾಕಿಕೊಂಡು ಅಷ್ಟೇ ಸುಖಪಡೆಯುತ್ತವೆ. ತನ್ನ ಮೂಗು ಕಿವಿಗಳಲ್ಲಿ ಅಥವಾ ತನ್ನನ್ನು ಎತ್ತಿಕೊಂಡವರ ಬಾಯಿ ಮೂಗುಗಳಲ್ಲಿ ಬೆರಳು ಹಾಕುವದು ಅಥವಾ ಸಿಕ್ಕ ಸಿಕ್ಕ ವಸ್ತುಗಳನ್ನು ಬಾಯಿ ಮೂಗುಗಳಲ್ಲಿ ಹಾಕಿಕೊಳ್ಳುವದು ಮುಂತಾದ ಸ್ವಭಾವಗಳಿಗೆ ಕೆಲವು ಮನೋವಿಶ್ಲೇಷಣ ಶಾಸ್ತ್ರಿಗಳು 'ರಂಧ್ರಸಂಸ್ಕಾರ'ಗಳೆನ್ನುತ್ತಾರೆ. ಅವೆಲ್ಲವೂ ಕಾಮಮೂಲವಾಗಿವೆ. ಮಿದುಳು ಸರಿಯಾಗಿ ಬೆಳೆಯದಿರುವ 'ಬಾಲ್ಯ ಮಸ್ತಿಷ್ಕ' (Infantile brain) ಉಳ್ಳ ದೊಡ್ಡವರಲ್ಲಿಯೂ ಅವೆ ಪ್ರವೃತ್ತಿಗಳು ಕಂಡುಬರುತ್ತವೆ. ಒಬ್ಬ ತರುಣಿಯು ಮೆತ್ತಗಿರುವ ವಸ್ತುಗಳಲ್ಲಿ ಬೆರಳಿನಿಂದ ತೂತು ಮಾಡುತ್ತಿದ್ದಳು. ನಂತರ ಅವರಲ್ಲಿ ವಿವಿಧ ರೀತಿಯಲ್ಲಿ ಬೆರಳನ್ನಾಡಿಸುತ್ತ ಕಾಮೋದ್ರೇಕಗೊಂಡು ಕೆಲವು ಹೊತ್ತಿನ ನಂತರ ತೃಪ್ತಿಯ ನಿಟ್ಟುಸಿರು ಬಿಟ್ಟು ಮುಗುಳುನಗೆಯಿಂದ ಹಿಂದೆ ಒರಗುತ್ತಿದ್ದಳು. ಇವೆಲ್ಲವೂ ಸ್ವರತಿಯ ಲಕ್ಷಣಗಳಾಗಿವೆಯೆಂದು ಡಾ. ಕೆಲ್ಲರನು ಹೇಳುತ್ತಾನೆ.

ಹೀಗೆ ಕುತೂಹಲದಿಂದ ಸುಖದಾಯಕವಾದ ತನ್ನ ಬೇರೆ ಬೇರೆ ಅಂಗಗಳನ್ನು ಸಂಶೋಧಿಸುತ್ತ ಕೊನೆಗೆ ಮಗುವಿಗೆ ತನ್ನ ಜನನೇಂದ್ರಿಯಗಳ ಕಡೆಗೆ ಲಕ್ಷ್ಯವು ಪ್ರೇರಿಸುತ್ತದೆ. ಮತ್ತು ಜನನೇಂದ್ರಿಯಗಳಲ್ಲಿ ಭಾವೀ ಪ್ರತ್ಯಕ್ಷ ಕಾಮಜೀವನದ ಪ್ರವೃತ್ತಿಗಳು ಸುಪ್ತವಾಗಿರುವದರಿಂದ ಅವುಗಳ ಆಟದಲ್ಲಿ ಅವಕ್ಕೆ ಮಿಕ್ಕ ಅಂಗಗಳ ಆಟಕ್ಕಿಂತಲೂ ತುಸು ಹೆಚ್ಚಿನ ಸುಖವೆನಿಸುತ್ತದೆ. ಜನನೇಂದ್ರಿಯಗಳಲ್ಲಿಯ ಸುಖ ಸಂವೇದನೆಯ ಅರಿವು ಬಹುತರ ಮಕ್ಕಳಿಗೆ ಮೊಲೆಯುಣುವಾಗ ಮೊದಲಾಗುತ್ತದೆ. ಮೊಲೆಯುಣುವಾಗ ಅನೇಕ ಮಕ್ಕಳ ಇಂದ್ರಿಯವು ಉದ್ರಿಕ್ತವಾಗುತ್ತದೆ. ಕೆಲವು ಮಕ್ಕಳು ಇತ್ತ ಮೊಲೆಯುಣುತ್ತ ಅತ್ತ ತಮ್ಮ ಇಂದ್ರಿಯವನ್ನು ಉದ್ರೇಕಿಸಿಕೊಳ್ಳುತ್ತಿರುತ್ತವೆ. ಹೆಣ್ಣು ಕೂಸಗಳು ಕೂಡ ಹಾಗೆ ಮಾಡುತ್ತಿದ್ದುದು ಕಂಡುಬಂದಿದೆ.

ಮಲವಿಸರ್ಜನ ಕಾಲದಲ್ಲಿ ಎಲ್ಲ ಮಕ್ಕಳಿಗೂ ಲಿಂಗೋದ್ರೇಕವಾಗುತ್ತದೆ. ಮೂತ್ರಾಶಯವು ತುಂಬಿಕೊಂಡಿರುವಾಗ ಲಿಂಗೋದ್ರೇಕವಾಗುವದು. ಮಲಮೂತ್ರ ವಿಸರ್ಜನವಾದ ಮೇಲೆ ಉದ್ರೇಕವು ಇಳಿಯುವದು. • ಲಿಂಗವು ಉದ್ರಿಕ್ತಾವಸ್ಥೆಯಲ್ಲಿರುವಾಗ ಮಕ್ಕಳಿಗೆ ಒಂದು ವಿಧದ ಸುಖದ ಅನುಭವವಾಗುವದು. ಆದ್ದರಿಂದ ಮಕ್ಕಳು ಸುಸೂತ್ರವಾಗಿ ಮಲಮೂತ್ರಗಳನ್ನು

ವಿಸರ್ಜಿಸದೆ ತಡೆ ತಡೆದು ವಿಸರ್ಜಿಸುತ್ತ ಆಗ ಆಗುತ್ತಿರುವ ಲಿಂಗೋದ್ರೇಕ ಸುಖವನ್ನು ಹೆಚ್ಚು ಹೊತ್ತಿನವರೆಗೆ ಅನುಭವಿಸಲು ಯತ್ನಿಸುವವು. ಮೊದಮೊದಲು ಮಲಮೂತ್ರ ವಿಸರ್ಜನಗಳು ಮಗುವಿನ ಅಂಕೆಯಲ್ಲಿರುವದಿಲ್ಲ. ಅವನ್ನು ಇಚ್ಛಾನುಸಾರ ತಡೆಯಲು ಬಂದಾಗ ಮಕ್ಕಳು ಅವನ್ನು ತಡೆಹಿಡಿದು ಅದರಿಂದುಂಟಾಗುವ ಲಿಂಗೋದ್ರೇಕವನ್ನು ಅನುಭವಿಸುವವು. ಕೆಲವು ಮಕ್ಕಳು ಒತ್ತಾಯಪಡಿಸಿದರೂ ಹಲವು ದಿನಗಳವರೆಗೆ ಮಲವಿಸರ್ಜನ ಮಾಡದಿರುವದಕ್ಕೆ ಆ ಸುಖಪಡೆಯುವ ಪ್ರವೃತ್ತಿಯೆ ಕಾರಣವೆಂದು ಡಾ. ವಿನ್‌ಫೀಲ್ಡ್ ಸ್ಕಾಟ್ ಎಂಬ ಮೂತ್ರಾಂಗ ವಿಜ್ಞಾನಿಯ ಅಭಿಪ್ರಾಯವಾಗಿದೆ. ಮಿತಿಮೀರಿ ಮಲಮೂತ್ರಗಳನ್ನು ತಡೆದು ನಂತರ ವಿಸರ್ಜಿಸುವದರಿಂದ ಹೆಣ್ಣು ಕೂಸುಗಳಿಗೂ ಆನಂದವಾಗುವದೆಂದು ಫ್ರಾಯಿಡನೆನ್ನುತ್ತಾನೆ. ನಿದ್ದೆಯಲ್ಲಿ ಹಾಸಿಗೆಯಲ್ಲಿ ಮೂತ್ರವಿಸರ್ಜಿಸುವ ಮಕ್ಕಳು ಬಹುಶಃ ಎಚ್ಚರಿರುವಾಗ ಅದನ್ನು ತಡೆದು ಸುಖಪಡುವ ಒಲವುಳ್ಳವಾಗಿರುವವು. ರೋಗ ಪರೀಕ್ಷಾರ್ಥವಾಗಿ ಗುದದಲ್ಲಿ ಬೆರಳು ಹಾಕಿದಾಗ ಲಿಂಗೋದ್ರೇಕವಾಗುವದು; ಹೇಗಸರಿಗೆ ಅದರಿಂದ ಸುಖದ ಅನುಭವವಾಗುವದು. ಅದೆ ವಿಧದ ಆನಂದವು ಮಲವನ್ನು ತಡೆದುಕೊಂಡು ಮಲಕೋಶವನ್ನು ತುಂಬಿಕೊಳ್ಳುವದರಿಂದಲೂ ಆಗುತ್ತಿರಬೇಕು. ಇವೆಲ್ಲ ದೈಹಿಕ ಸಹಜ ಕ್ರಿಯೆಗಳಿಂದ ಸ್ಫುರತಿಯನ್ನು ಅನುಭವಿಸುವ ದಾರಿಗಳಾದವು.

ಇನ್ನು ಆರೈಕೆ ಮಾಡುವವರ ತಪ್ಪುಗಳಿಂದಲೂ ಮಕ್ಕಳ ಲಿಂಗೋದ್ರೇಕಕ್ಕೆ ಸಹಾಯವಾಗುವದು. ಅವುಗಳಲ್ಲಿ ಹೀರ ಪ್ರಚುರವಾದ ತಪ್ಪೆಂದರೆ ಮಕ್ಕಳು ಸುಲಭವಾಗಿ ಮಲಗದಿದ್ದರೆ ಅಥವಾ ಬಹಳವಾಗಿ ಅಳುತ್ತಿದ್ದರೆ ಅವುಗಳ ಇಂದ್ರಿಯದ ಮೇಲೆ ಹಾಯಾಗಿ ಚಪ್ಪರಿಸುವ ರೂಢಿಯು ಅನೇಕ ತಾಯಂದಿರಲ್ಲಿ ಅಥವಾ ನರ್ಸುಗಳಲ್ಲಿ ಇದೆ. ಹಾಗೆ ಇಂದ್ರಿಯವನ್ನು ಬಡಿಯುವದರಿಂದ ಮಗುವಿಗೆ ಸುಖವೆನಿಸುವದು. ನಂತರ ಅದಕ್ಕೆ ತನ್ನ ಇಂದ್ರಿಯದ ಮೇಲೆ ಕೈಯಾಡಿಸಿಕೊಳ್ಳುವ ಚಟವು ಉಂಟಾಗುವದು. ಕೆಲವು ಹೆಂಗಸರಿಗೆ ಮಕ್ಕಳ ಇಂದ್ರಿಯದಲ್ಲಿ ಕಚಕುಳಿಯಾಡಿಸುವ ( ಕಟ್ಟಾಡಿಸುವ ) ಅಭ್ಯಾಸವಿರುತ್ತದೆ. ಮಕ್ಕಳ ಇಂದ್ರಿಯದ ಮೇಲೆ ಮುದ್ದಿಡುವ ಪ್ರವೃತ್ತಿಯೂ ಬಹಳ ಪ್ರಚುರವಾಗಿದೆ. ಗಂಡು ಮಕ್ಕಳ ಇಂದ್ರಿಯವನ್ನು ಮುದ್ದಿಡುವದ

ರಿಂದ ಬಂಜೆಯರಿಗೆ ಮಕ್ಕಳಾಗುವವೆಂಬ ಭಾವಿಕತನವೂ ಅದಕ್ಕೆ ಕಾರಣವಾಗಿರಬಹುದು. ಬಿಗಿಯಾದ ಚಡ್ಡಿಗಳನ್ನು ತೊಡಿಸುವದರಿಂದ ಅವಾಸ್ತವವಾಗಿ ಲಿಂಗೋದ್ರೇಕಕ್ಕೆ ಕಾರಣವಾಗುವದು. ಬಹಳ ಮಿದುವಾದ ಹಾಸಿಗೆಯನ್ನು ಹಾಸುವದರಿಂದಲೂ ಕೂಸುಗಳ ಲಿಂಗೋದ್ರೇಕವಾಗುವದೆಂದು ಕಂಡುಬಂದಿದೆ.

ಕೆಲವು ಶಾರೀರಿಕ ದೋಷಗಳಿಂದಲೂ ಲಿಂಗೋದ್ರೇಕವಾಗುವದು. ಹೆಣ್ಣು ಕೂಸುಗಳ ಯೋನಿಯಲ್ಲಿ ತುರಿಯುಂಟಾಗುವದು. ಜನನೇಂದ್ರಿಯದ ಸುತ್ತಲು ಗಜಕರ್ಣ, ಕಜ್ಜಿ ಮುಂತಾದ ಚರ್ಮರೋಗಗಳಾಗಿದ್ದರೆ ಮಕ್ಕಳು ಅವನ್ನು ತುರಿಸಿಕೊಳ್ಳುವಾಗ ಸಹಜವಾಗಿ ಕಾಮೇಂದ್ರಿಯಗಳಲ್ಲಿಯೂ ಸುಖ ಚಲನೆಯುಂಟಾಗಿ ಅವುಗಳ ಕಡೆಗೆ ಮನಸ್ಸು ಎಳೆಯಲ್ಪಡುವದು. ಕರುಳಿನಲ್ಲಿ ದಾರದ ತುಂಡುಗಳಂತಹ ಅತಿಸೂಕ್ಷ್ಮ ಜಂತುಗಳಾಗುವವು. ಅವುಗಳ ತಾಪದಿಂದ ಜನನೇಂದ್ರಿಯಗಳಲ್ಲಿ ತುರಿ ಉದ್ರೇಕಗಳಾಗುವವು. ಕೆಲವು ಸಲ ಜಂತುಗಳು ಗುದದ್ವಾರದಿಂದ ಹೊರಬಂದು ಜನನೇಂದ್ರಿಯಗಳಲ್ಲಿ ಹೊಕ್ಕು ತುರಿಯನ್ನೆಬ್ಬಿಸುವದೂ ಉಂಟು. ಗಂಡು ಮಕ್ಕಳ ಲಿಂಗದ ಮುಂದೊಗಲು ತೀರ ಸಂಕುಚಿತವಾಗಿರುವದರಿಂದ ಮೇಲಿಂದ ಮೇಲೆ ಲಿಂಗೋದ್ರೇಕವಾಗುವದು.

ನಾವಾನ್ಯರ ತಿಳುವಳಿಕೆಗೆ ಹೊಳೆಯದ ಇಂದ್ರಿಯೋದ್ರೇಕದ ಇನ್ನೊಂದು ತೀರ ಪ್ರಚುರವಾದ ಕಾರಣವೆಂದರೆ ಕುತೂಹಲವಾಗಿದೆ. ಕುತೂಹಲವು ಎರಡು ರೀತಿಯಿಂದ ಹುಟ್ಟಿಕೊಳ್ಳಬಹುದು. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ತನ್ನ ಅಂಗಾಂಗಗಳನ್ನು ಪರೀಕ್ಷಿಸಿ ನಿರೀಕ್ಷಿಸುತ್ತಿರುವಾಗ ಕಾಮಾಂಗಗಳ ಚಲನೆಯಲ್ಲಿರುವ ಆನಂದವೂ ಮಕ್ಕಳ ಲಕ್ಷವನ್ನೆಳೆಯಬಹುದು. ಇಲ್ಲವೆ ಹಿರಿಯರೂ ತಂದೆ ತಾಯಿಗಳೂ ಸಂಭೋಗಿಸುತ್ತಿರುವದನ್ನು ನೋಡಿದ ಮಕ್ಕಳು ಬರಿ ಉತ್ಕಂಠೆಯಿಂದ ತಮ್ಮೊಳಗೆ ಪ್ರಯೋಗ ಮಾಡಿಕೊಳ್ಳುವದೂ ಉಂಟು. ನಾಲ್ಕೈದು ವರ್ಷದ ಗಂಡು ಹೆಣ್ಣುಗಳು ಕೂಡ ತಮಾಷೆಗಾಗಿ ತಮ್ಮ ಲಿಂಗಯೋನಿಗಳ ಸಂಪರ್ಕವನ್ನು ಮಾಡುತ್ತಿರುವದನ್ನು ಬಹುಶಃ ಎಲ್ಲರೂ ನೋಡಿದ್ದಾರೆ. ಆಗ ಅವುಗಳಲ್ಲಿ ಪ್ರೌಢರ ಕಾಮವಿಕಾರವಿರುವದಿಲ್ಲ. ಆದರೆ ಬರಿ ಕುತೂಹಲ ಹಾಗೂ ಅನುಕರಣ ಬುದ್ಧಿಯಿಂದ ಅವು ಆ ಆಟಗಳನ್ನು ಆಡುತ್ತವೆ. ಆಗ ಆಗುತ್ತಿರುವ ಆನಂದವೆ ಅವನ್ನು ಮುಂದೆ ಇಂದ್ರಿಯ ಸಂಚಾಲನೆಯ ಚಟಕ್ಕೆ ತಳ್ಳುತ್ತದೆ. ಅಂತಹ ಕಾಮನಾಟಗಳು ( Sex-

Games ) ಎಲ್ಲ ಜನಾಂಗಗಳಲ್ಲಿ ಮೂರರಿಂದ ಏಳು ವರ್ಷಗಳವರೆಗಿನ ಮಕ್ಕಳಲ್ಲಿ ಕಂಡುಬರುತ್ತವೆಂದು ಜನಾಂಗ ಶಾಸ್ತ್ರಜ್ಞರು ಹೇಳುತ್ತಾರೆ.

ಈವರೆಗೆ ವಿವರಿಸಿದ ಅನೇಕ ಆನಂದದಾಯಕ ಕಾರಣ ಸನ್ನಿವೇಶಗಳ ಮೂಲಕ ಗಂಡು ಹೆಂಣು ಶಿಶುಗಳ ಲಕ್ಷ್ಯವು ಜನನೇಂದ್ರಿಯಗಳ ಕಡೆಗೆ ಹರಿಯುತ್ತಿದೆ. ಮುಂದೆ ಆ ಆನಂದವನ್ನು ಪಡೆಯುವ ಪ್ರವೃತ್ತಿಯೆ ಬಾಲ್ಯಾವಸ್ಥೆಯಲ್ಲಿಯೂ ಬಂದು ಕಾಮಾಂಗಗಳ ಸಂಚಾಲನ, ಘರ್ಷಣಗಳ ಒಲವನ್ನು ಹುಟ್ಟಿಸುತ್ತದೆ. ಬಾಲ್ಯಾವಸ್ಥೆಯಲ್ಲಿ ಸಹಜವಾಗಿ ಸ್ವಲಿಂಗಿಗಳೊಡನೆ ಬೆರೆತು ಆಟನೋಟಗಳಲ್ಲಿ ಮೈಮರೆಯುವ ಸಮರತಿಯು ಅರಳುವುದಕ್ಕೆ ಏನಾದರೂ ತಡೆಗಳಿದ್ದರೂ—ಗೆಳೆಯರಿಲ್ಲದಿದ್ದರೆ, ಎಲ್ಲಿಯೂ ಹೋಗಬೇಡವೆಂದು ಹಿರಿಯರು ಕಟ್ಟಪ್ಪಣೆ ಮಾಡಿದ್ದರೆ—ಶೈಶವದ ಸ್ವರತಿಯು ಬಾಲ್ಯದಲ್ಲಿಯೂ ಉಳಿದುಕೊಂಡುಬಿಡುವದು.

ಆದರೆ ಶೈಶವದ ಅಥವಾ ಬಾಲ್ಯದ ಸ್ವರತಿಯಲ್ಲಿ ಇರುವುದು ಬಾಲ್ಯಕಾಮವೆ ಹೊರತು ಪ್ರೌಢಕಾಮವಲ್ಲ. ಬಾಲ್ಯಕಾಮಕ್ಕೆ ಅಶುಕ್ರಕಾಮವೆಂದೂ ಪ್ರೌಢಕಾಮಕ್ಕೆ ಸಶುಕ್ರಕಾಮವೆಂದೂ ಆಯುರ್ವೇದವು ಹೇಳುತ್ತದೆ. ದೇಹದಲ್ಲಿ ವೀರ್ಯೋದಯವಾದ ಮೇಲೆ ಕಾಮವು ಸಶುಕ್ರವಾಗುವದು. ಆಗ ಪ್ರತಿಲಿಂಗಿಗಳ ಪ್ರೇಮಾಕರ್ಷಣಗಳು ಹುಟ್ಟಿಕೊಳ್ಳುವವು. ಶೈಶವ ಬಾಲ್ಯಗಳಲ್ಲಿ ಇನ್ನೂ ಶುಕ್ರೋದಯವಾಗಿರುವದಿಲ್ಲವಾದ್ದರಿಂದ ಆಗಿನ ಕಾಮಾಂಗಗಳ ಸಂಚಾಲನ, ಘರ್ಷಣಗಳಲ್ಲಿ ಸಂಭೋಗಲಾಲನೆಯಿರುವದಿಲ್ಲ; ಹಾಗೂ ಆ ಕಾಲದಲ್ಲಿ ಪ್ರತಿಲಿಂಗಿಗಳ ಕಾಮುಕ ಚಿತ್ರಗಳೂ ಮನದಲ್ಲಿರುವುದಿಲ್ಲ. ಆಗಿನ ಸ್ವರತಿಯು ಕೇವಲ ಇಂದ್ರಿಯ ಸಂಚಾಲನೆಯಿಂದುಂಟಾದ ಶಾರೀರಿಕ ಸುಖದ ಪರಿಣಾಮವಾಗಿರುತ್ತದೆ. ಅಲ್ಲದೆ ಕೆಲವು ಮಕ್ಕಳು ಬಹಳ ಆನಂದವಾದಾಗ ಇಂದ್ರಿಯವನ್ನು ಚಾಲನೆಗೊಳಿಸುತ್ತ ಕುಣಿಯುತ್ತಿರುವುದೂ ಕಂಡುಬಂದಿದೆ. "ನಮ್ಮ ಐದು ವರ್ಷದ ಹುಡುಗಿಯು ಸಿಹಿಯಾದ ತಿನಿಸು ಏನಾದರೂ ಸಿಗುತ್ತದೆಂದು ತಿಳಿದರೆ ಕೂಡಲೆ ತನ್ನ ಯೋನಿಯನ್ನು ಅಂಗೈಯಿಂದ ಘರ್ಷಿಸಿಕೊಳ್ಳುವದೆಂ"ದು ಒಬ್ಬ ತಂದೆಯು ಗಾಬರಿಯಿಂದ ನಮ್ಮ ಕಡೆಗೆ ಬಂದಿದ್ದ. ಡಾ॥ ಕೆಲ್ಲರನು ಮನೋದೋಷವುಳ್ಳ ಸ್ತ್ರೀ ಪುರುಷರ ಆಸ್ಪತ್ರೆಯಲ್ಲಿರುವಾಗ ಅವರನ್ನು ಬಹು ಕರುಣೆಯಿಂದ ನಡೆಸಿ

ಕೊಳ್ಳುತ್ತಿದ್ದನು. ಅವರೆಲ್ಲರ ಮನಸ್ಸಿನ ವಯಸ್ಸು ೫–೬ ವರ್ಷಗಳಷ್ಟು ಇತ್ತು. ಅವರಲ್ಲಿ ಅನೇಕರು ಡಾ॥ ಕೆಲ್ಲರನನ್ನು ನೋಡಿದ ಕೂಡಲೆ ಪ್ರೀತಿ ಉಕ್ಕೇರಿ ನಲಿದು ಮುಷ್ಟಿಮೈಥುನ ಮಾಡಿಕೊಳ್ಳುತ್ತಿದ್ದರೆಂದು ಸೆಕ್ಸೊಲೋಜಿ ಪತ್ರಿಕೆಯಲ್ಲಿ ಬರೆಯಲಾಗಿತ್ತು. ಆದರಿಂದ ಶೈಶವದಲ್ಲಿಯು ಮತ್ತು ಬಾಲ್ಯದಲ್ಲಿಯು ಸ್ವರತಿಯು ಕೇವಲ ದೈಹಿಕ ಆನಂದೋತ್ಪಾದನದ ಅಥವಾ ಪ್ರೀತಿಯ ಪ್ರಕಟನದ ಅಶುಕ್ರಕಾಮದ ಲಕ್ಷಣವಾಗಿದೆಯೆಂದು ಸಿದ್ಧವಾಗುವುದಲ್ಲವೇ ?



# ನಾಲ್ಕನೆಯ ಪ್ರಕರಣ

*

## ತಾರುಣ್ಯದ ಸ್ಫುರತಿ

ಜೀವನದ ರಥಕ್ಕೆ ಎರಡು ಚಕ್ರಗಳಿವೆ; ಒಂದು ಸ್ಥಿತಿ ಅಥವಾ ಸ್ವರ ಕ್ಷಣೆಯ ವೃತ್ತಿಯದು; ಇನ್ನೊಂದು ಸೃಷ್ಟಿ ಅಥವಾ ಪ್ರಜೋತ್ಪತ್ತಿಯ ವೃತ್ತಿಯದು. ಜೀವನದ ಆರಂಭದಿಂದಲ ಅವೆರಡು ಚಕ್ರಗಳೂ ತಿರುಗಲೆ ಬೇಕು. ಸ್ಥಿತಿಯ ವೃತ್ತಿಯು ಜೀವಿಗೆ ಹಸಿವೆ, ನಿದ್ದೆ, ನೀರಡಿಕೆಗಳ ವೇಗಗ ಳನ್ನು (ಬಯಕೆ) ತೃಪ್ತಿಪಡಿಸಿಕೊಂಡು ಸಾವಿನ ನೋವಿನ ಸನ್ನಿವೇಶ ಗಳಿಂದ ದೂರ ಓಡುವ ಒಲವನ್ನು ಹುಟ್ಟಿಸುತ್ತದೆ. ಅನ್ನದಿಂದ ದೇಹವನ್ನು ಪೋಷಿಸಿಕೊಂಡು ಬಾಳುವುದೆ ಸ್ಥಿತಿವೃತ್ತಿಯ ಸ್ವಭಾವವಾಗಿದೆ. ಈ ವೃತ್ತಿಯು ಜನ್ಮದಾರಭ್ಯ ಜಾಗೃತವಾಗಿರುವುದು ಸಾಮಾನ್ಯರಿಗೂ ತಿಳಿ ಯುವಂತಿದೆ. ಸೃಷ್ಟಿಯ ವೃತ್ತಿಯು ಜೀವಿಯನ್ನು ಪ್ರಜೋತ್ಪಾದನೆಗೆ ತೊಡಗಿಸುತ್ತದೆ. ಆದರೆ ಈ ವೃತ್ತಿಯು ಹುಟ್ಟಿನಿಂದ ಮೊದಲ್ಗೊಂಡು ಜಾಗೃತವಾಗಿರುವದಿಲ್ಲ ಎಂದು ಸಾಮಾನ್ಯರ ತಿಳುವಳಿಕೆಯಾಗಿತ್ತು. ಏಕೆಂದರೆ ಮಕ್ಕಳು ಪ್ರಜೋತ್ಪತ್ತಿಗೆ ತೊಡಗಿದುದನ್ನು ಯಾರೂ ನೋಡಿಲ್ಲ. ಅಂದ ಮೇಲೆ ಜನ್ಮಾರಭ್ಯ ಸೃಷ್ಟಿವೃತ್ತಿಯಿರುವುದೆಂದು ಹೇಗೆ ಹೇಳುವುದು?

ಹೀಗೆ ಸಂಶಯವುಂಟಾಗುವುದಕ್ಕೆ ಒಂದು ಕಾರಣವಿದೆ. ಸ್ಥಿತಿಗೆ ಬೇಕಾಗಿ ರುವ ಇಂದ್ರಿಯಗಳೆಲ್ಲ ಕೂಸು ಹುಟ್ಟುವ ಮುಂಚೆಯೇ ಸಿದ್ಧವಾಗಿರುತ್ತವೆ. ಪೋಷಕ ವಸ್ತುಗಳನ್ನು ಸೇವಿಸಿ ಬೇಕಾದುದನ್ನು ಅರಗಿಸಿಕೊಂಡು ಬೇಡವಾದು ದನ್ನು ವಿಸರ್ಜಿಸಿ ಜೀವಧಾರಣೆ ಮಾಡಲಿಕ್ಕೆ ಆವಶ್ಯಕವಾದ ಪಾಚಕಾಂಗ, ಮಲಮೂತ್ರಾಂಗ. ಹೃದಯ ಫುಪ್ಫುಸಗಳು, ಉಸುರಿನ ಮೊದಲುಗೊಂಡ

ಎಚ್ಚತ್ತುಕೊಳ್ಳುತ್ತವೆ. ಆದರೆ ಪ್ರಜೋತ್ಪತ್ತಿಗೆ ಆವಶ್ಯಕವಾದ ಇಂದ್ರಿಯ (ಕಾಮಾಂಗ) ಗಳು ಇನ್ನೂ ಪೂರ್ಣವಿಕಸಿತವಾಗಿರುವದಿಲ್ಲ. ಆದ್ದರಿಂದ ಸೃಷ್ಟಿವೃತ್ತಿ ಶೈಶವದಲ್ಲಿ ಇರಲಿಕ್ಕಿಲ್ಲ ಎಂಬ ಸಂಶಯವು ಸಾಹಜಿಕವಾದುದು. **ಆದರೆ ನಿಧಾನವಾಗಿಯೂ ಭದ್ರವಾಗಿಯೂ ಕಟ್ಟುವದೂ ಹೆಚ್ಚು ಹೆಚ್ಚು ಮುಖ್ಯವಾದುದನ್ನು ಮೊದಮೊದಲು ಕಟ್ಟುವುದೂ ಪ್ರಕೃತಿಯ ನಿಯಮವಾಗಿದೆ.** ಸೃಷ್ಟಿವೃತ್ತಿಗಿಂತ ಸ್ಥಿತಿವೃತ್ತಿಯು ಹೆಚ್ಚು ಮಹತ್ವದ್ದಾಗಿದೆ. ಸಂಚಯವಾಗದೆ ಹಂಚುವುದೆಲ್ಲಿಂದ? ಮೊದಲು ತನ್ನ ಬಾಳು ಭದ್ರವಾದ ಮೇಲೆ ಮತ್ತೊಂದು ಬಾಳನ್ನು ಚಿಗುರಿಸುವದು. ಆದ್ದರಿಂದ ಕೂಸು ಬಸುರಿನಲ್ಲಿರುವಾಗ ಅದರ ಸ್ಥಿತಿ ಮತ್ತು ಸೃಷ್ಟಿ ವೃತ್ತಿಗಳೆರಡಕ್ಕೂ ಸಂಬಂಧಿಸಿದ ಅಂಗಗಳ ರಚನೆಯು ನಡೆದಿರುವುದಾದರೂ ಸ್ಥಿತಿವೃತ್ತಿಯ ಅಂಗಗಳು ನವಮಾಸದೊಳಗಾಗಿ ಪೂರ್ಣ ವಿಕಸಿತವಾಗಿ ಮಗು ಹುಟ್ಟಿದ ಕೂಡಲೆ ಕೆಲಸ ಪ್ರಾರಂಭ ಮಾಡಿ ಆಜೀವನವೂ ಅವಿಚ್ಛಿನ್ನವಾಗಿ ದುಡಿಯುವವು. ಆದರೆ ಕೂಸು ಹುಟ್ಟುವಾಗ ಸೃಷ್ಟಿವೃತ್ತಿಯ ಇಂದ್ರಿಯಗಳ ರಚನೆಯು ಇನ್ನೂ ಅಪೂರ್ಣವಾಗಿರುತ್ತದೆ. ಹುಟ್ಟಿ ಸುಮಾರು ಹದಿನಾರು ವರ್ಷಗಳವರೆಗೆ ಹೆಂಣಿನಲ್ಲೂ, ಇಪ್ಪತ್ತು ವರ್ಷಗಳವರೆಗೆ ಗಂಡಿನಲ್ಲೂ ಸೃಷ್ಟ್ಯಾಂಗಗಳು ಇನ್ನೂ ಪರಿಪಕ್ವಾವಸ್ಥೆಯನ್ನು ಮುಟ್ಟುವದಿಲ್ಲವೆಂದು ಆಯುರ್ವೇದವು ಹೇಳುವದು. ಆಧುನಿಕ ವಿಜ್ಞಾನಿಗಳೂ ಅದನ್ನೇ ಹೇಳುತ್ತಿದ್ದಾರೆ.

**‘ಪೂರ್ಣ ಷೋಡಶವರ್ಷಾ ಸ್ತ್ರೀ ಪೂರ್ಣವಿಂಶೇನ ಸಂಗತಾ ವೀರ್ಯವಂತಂ ಸುತಂ ಸೂತೇ’** ಅಂದರೆ ಹದಿನಾರು ವರುಷ ತುಂಬಿದ ತರುಣಿಯು ಇಪ್ಪತ್ತು ತುಂಬಿದ ತರುಣನೊಡನೆ ಸಂಭೋಗಿಸಿದರೆ ವೀರ ಪುತ್ರನನ್ನು ಪಡೆಯುತ್ತಾಳೆ ಎಂದೂ ‘**ಊನ ಷೋಡಶಾಯಾಮ್ ಅಪ್ರಾಪ್ತಃ ಪಂಚವಿಂಶತಿಂ। ಯದ್ಯಾಧತ್ತೇ ಪುಮಾನ್ ಗರ್ಭಂ ಕುಕ್ಷಿಸ್ಥಃ ಸ ವಿಪದ್ಯತೇ।**” ಎಂದರೆ ಹದಿನಾರು ತುಂಬದ ತರುಣಿಯಲ್ಲಿ ಇಪ್ಪತ್ತೈದು ತುಂಬದ ತರುಣನು ಗರ್ಭವನ್ನು ನಿಲ್ಲಿಸಿದರೆ ಆ ಗರ್ಭಕ್ಕೆ ಬಸುರಿನಲ್ಲೇ ಹಲವು ಸಂಕಟಗಳು ಬರಬಹುದು ಎಂದರ್ಥ. ಈ ಮಾತುಗಳಿಂದ ಪ್ರಜೋತ್ಪತ್ತಿಯ ಅಂಗಗಳು ಸ್ತ್ರೀಯಲ್ಲಿ ಹದಿನಾರನೆ ವಯಸ್ಸಿಗೂ ಪುರುಷನಲ್ಲಿ ಇಪ್ಪತ್ತನೆ ವಯಸ್ಸಿಗೂ ಪೂರ್ಣ ವಿಕಸಿತವಾಗುವವೆಂದು ಆಯುರ್ವೇದದ ಅಭಿ

ಪ್ರಾಯವಿದ್ದಂತಾಯಿತು. ಆದ್ದರಿಂದ ಆ ವಯಸ್ಸಿನವರೆಗೆ ಮಕ್ಕಳಲ್ಲಿ ಸೃಷ್ಟಿ ವೃತ್ತಿಯು (ಕಾಮವು) ಇರುವುದೆಂಬುದು ಶಾಸ್ತ್ರಸಮ್ಮತವಲ್ಲ ಎಂದು ಕೆಲವರು ಆಕ್ಷೇಪಿಸುವರು. ಆದರೆ ಬಯಕೆಯುಂಟಾದ ಕೂಡಲೆ ಕೆಲಸವೂ ನಡೆಯುವುದೆಂದು ಹೇಳಲಾಗದು. ವೃತ್ತಿಯಿರುವಲ್ಲೆಲ್ಲ ಪ್ರವೃತ್ತಿಯೂ ಇದ್ದೇ ತೀರುವದೆಂದು ಹೇಳಲಾಗದು ಅಥವಾ ಪ್ರವೃತ್ತಿಯ ಎಲ್ಲ ಲಕ್ಷಣಗಳನ್ನೂ ಸಾಮಾನ್ಯರು ಗುರುತಿಸಲಾರರು. ಭೂಕಂಪವು ಒಮ್ಮೆಲೆ ಮಹಾಭೂಖಂಡಗಳನ್ನು ನಡುಗಿಸಿ ಪುಡಿಮಾಡಿದರೂ ಆ ದುರ್ಘಟನೆಯ ಸಿದ್ಧತೆಯು ಭೂಗರ್ಭದಲ್ಲಿ ಸಾವಕಾಶವಾಗಿ ಹಲವು ದಿನಗಳಿಂದ ನಡೆದಿರುತ್ತದೆಂಬುದು ವಿಜ್ಞಾನಿಗಳಿಗೆ ಗೊತ್ತಿದೆ. ಅಲ್ಲದೆ ಭೂಕಂಪ, ಜ್ವಾಲಾಮುಖಿಗಳಾಗುವ ಮೊದಲು ೨-೩ ತಿಂಗಳುಗಳಿಂದಲೆ ಆ ಪ್ರದೇಶಗಳಲ್ಲಿಯ ಪಶುಪಕ್ಷಿಗಳು ಕ್ರಿಮಿಕೀಟಕಗಳು ಬೇರೆ ಪ್ರದೇಶಗಳಿಗೆ ಓಡಿ ಹೋಗುವವೆಂದು ತಜ್ಞರು ಹೇಳುವರು. ಬಿಹಾರದ ಭೂಕಂಪವಾಗುವ ಮೊದಲು ಕೂಡ ಹಾಗೆ ಆಯಿತೆಂದು ಕಣ್ಣಾರೆ ನೋಡಿದವರು ಹೇಳಿದ್ದಾರೆ. ಅಂದರೆ ಭೂಕಂಪದ ಪೂರ್ವದಲ್ಲಿ ವಾತಾವರಣದಲ್ಲಿ ಉಂಟಾಗುವ ಸೂಕ್ಷ್ಮವಾದ ಸ್ಥಿತ್ಯಂತರಗಳು ನಿಸರ್ಗಜೀವಿಗಳಿಗೆ ತಿಳಿಯುತ್ತವೆ. ಕೃತ್ರಿಮ ಜೀವನವನ್ನು ಸಾಗಿಸಿರುವ ಮನುಷ್ಯರಿಗೆ ಅದರ ಸುಳುವು ಹತ್ತುವದಿಲ್ಲ. ಹಾಗೆಯೆ ಪ್ರಜೋತ್ಪತ್ತಿಯ ಪ್ರವೃತ್ತಿ ಅಥವಾ ಸಂಭೋಗ ಪ್ರವೃತ್ತಿಯು ವ್ಯಕ್ತವಾಗುವ ಪೂರ್ವದಲ್ಲಿಯೆ ಅದರ ಸೂಕ್ಷ್ಮವೃತ್ತಿಗಳು ತನುಮನಗಳ ಗರ್ಭದಲ್ಲಿ ಮಿಸುಕಾಡುತ್ತಿರುತ್ತವೆ. ಅವುಗಳನ್ನು ವಿಜ್ಞಾನಿಗಳ ಕಣ್ಣು ಮಾತ್ರ ಗುರುತಿಸಬಲ್ಲದು.

ಮರದ ಗುಣವು ಮೊಳಕೆಯಲ್ಲಿಯೆ ತೋರುವುದು. ಮುಂದೆ ಸಂಭೋಗ ಪ್ರವೃತ್ತಿಯಲ್ಲಿ ಅರಳಬೇಕಾದ ವೃತ್ತಿ, ಮೊದಲು ಸಂಭೋಗಾಂಗಗಳನ್ನೂ, ಗರ್ಭಾಂಗಗಳನ್ನೂ ಕಟ್ಟುವುದರಲ್ಲಿ ತೊಡಗಿರುತ್ತದೆ. ಸೃಷ್ಟಿವೃತ್ತಿಯು ಜಾಗೃತವಾಗಿಲ್ಲದಿದ್ದರೆ ಕಾಮಾಂಗಗಳು ಪೂರ್ಣಾವಸ್ಥೆಗೆ ಮುಟ್ಟಲಾರವು. ಮತ್ತೆ ಆ ವೃತ್ತಿಯು ಕಾಮಾಂಗಗಳನ್ನು ಕಟ್ಟುತ್ತಿರುವಾಗಲೆ ಕಾಮಕ್ರೀಡೆಯ ಪ್ರವೃತ್ತಿಗಳನ್ನೂ ಸೂಕ್ಷ್ಮವಾಗಿ, ಅಸ್ಪಷ್ಟವಾಗಿ ಮಿಂಚಿಸುತ್ತಿರುತ್ತದೆ. ಮನುಷ್ಯನು ಶೈಶವ ಬಾಲ್ಯಗಳಲ್ಲಿ ಆ ಕ್ರೀಡೆಗೆ ಸಂಬಂಧಿಸಿದ ತನ್ನಲ್ಲಿರುವ ಸಾಧನಗಳನ್ನು ಮೊದಲು ಪರಿಚಯ ಮಾಡಿಕೊಳ್ಳುವನು.

ಆಗಲೆ ಅವನಲ್ಲಿ ಬಹು ಸೂಕ್ಷ್ಮವಾಗಿ ಭಾವೀ ಕಾಮಕ್ರೀಡೆಯ ನಿಶ್ಚಿತ ಸ್ವಭಾವಗಳು ಚಿಗಿತುಕೊಳ್ಳುವವು. ಅವುಗಳ ರಮ್ಯತೆಯಿಂದ ಆಕರ್ಷಿಸಲ್ಪಟ್ಟೇ ಅವನು ಶೈಶವದಲ್ಲಿ ಸ್ವರತನಾಗುವನು. ವಿವಿಧ ರೀತಿಯಿಂದ ತನ್ನ ಕಾಮಾಂಗಗಳೊಡನೆ ಆಡುವನು. ಆವರೆ ಪ್ರಕೃತಿಗೆ ಅವನಲ್ಲಿ ಪ್ರತಿಲಿಂಗಿಯನ್ನು ಪ್ರೇಮಿಸುವ ಒಲವನ್ನು ಹುಟ್ಟಿಸುವುದು ಗುರಿಯಾಗಿದೆಯಲ್ಲವೆ? ಆದ್ದರಿಂದ ಬಾಲ್ಯದಲ್ಲಿ ಮನುಷ್ಯನು ತನ್ನ ದೇಹದಲ್ಲಿ ಕೇಂದ್ರೀಕರಿಸಿದ ರತಿಯನ್ನು (ರಮಿಸುವ ಸ್ವಭಾವವನ್ನು) ತನ್ನಂತಿರುವವರ ಕಡೆಗೆ ಹೊರಳಿಸಲು ಪ್ರಕೃತಿಯು ಪ್ರೇರಿಸುವಳು. ಅದರ ಪರಿಣಾಮವಾಗಿ ಶೈಶವದ ಸ್ವರತಿಯ ಲಕ್ಷಣಗಳಾದ ಲಿಂಗಸಂಚಾಲನ, ಯೋನಿಘರ್ಷಣಗಳು ಕ್ರಮೇಣ ಬಾಲಬಾಲಿಕೆಯರ ಲಕ್ಷ್ಯದಿಂದ ಹೊರಗಾಗುತ್ತವೆ. ಕಾಮಾಂಗಗಳಿಗೆ ಪೂರ್ಣ ವಿಶ್ರಾಂತಿ ಕೊಟ್ಟು ಒಳಗೊಳಗೆ ಅವನ್ನು ವಿಕಾಸಗೊಳಿಸುತ್ತ ತಾರುಣ್ಯದಲ್ಲಿ ಕಾಮೋದಯವನ್ನು ಉಂಟುಮಾಡಲೆಂದೇ ಪ್ರಕೃತಿಯು ಬಾಲಬಾಲಿಕೆಯರ ಜನನೇಂದ್ರಿಯಗಳ ಮೇಲಿರುವ ಲಕ್ಷ್ಯವನ್ನು ಗೆಳೆಯ ಗೆಳತಿಯರ ಕಡೆಗೆ, ಆಟನೋಟಗಳ ಕಡೆಗೆ ತಿರುಗಿಸುತ್ತಾಳೆ. ಆದ್ದರಿಂದ ಶೈಶವದಲ್ಲಿಯ ಮುಷ್ಟಿಮೈಥುನದಂತಹ ಲಕ್ಷಣಗಳಾವವೂ ಬಾಲ್ಯದಲ್ಲಿ ಹೆಚ್ಚಾಗಿರುವುದಿಲ್ಲ. ಮತ್ತು ಬೆಳೆಗೆಯು ನೈಸರ್ಗಿಕವಾಗಿ ಆಗಿದ್ದರೆ ಬಾಲ್ಯವು ಸ್ವರತಿರಹಿತವಾಗಿರಬೇಕು. ಹಾಗಿಲ್ಲದೆ ಬಾಲ್ಯದಲ್ಲಿಯೂ ಹುಡುಗ ಹುಡುಗಿಯರು ಆಟಪಾಟಗಳನ್ನು ಬಿಟ್ಟು ಗೆಳೆಯ ಗೆಳತಿಯರಿಲ್ಲದೆ ಸ್ವರತಿಯಲ್ಲಿ ಮಗ್ನರಾಗುತ್ತಿದ್ದರೆ ಅವರ ತನುಮನಗಳ ಬೆಳೆಗೆಗೆ ಎಲ್ಲಿಯೊ ತಡೆಯಾಗಿದೆಯೆಂದರಿತು ತಜ್ಞರ ಸಲಹೆಯನ್ನು ಪಡೆಯಬೇಕು.

ಈಗ ಶೈಶವದಲ್ಲಿಯ ಸ್ವರತಿಯಲ್ಲಿ ಮಾನಸಿಕ ಕಾಮವು ಇಲ್ಲಮನು ತಾರುಣ್ಯದಲ್ಲಿ ಎಲ್ಲಿಂದ ಬಂತೆಂಬುದನ್ನು ತಿಳಿದುಕೊಳ್ಳುವಾ. ಆಯುರ್ವೇದದಲ್ಲಿ ದೇಹವು ಸಪ್ತಧಾತುಗಳಿಂದ ನಿರ್ಮಿತವಾಗಿದೆ ಎಂದು ಹೇಳಿದೆ. ಹಾಗಾದರೆ ಸಪ್ತಧಾತುಗಲ್ಲೊಂದಾದ ಮತ್ತು ಆಗರ್ಭ ಶರೀರ ರಚನೆಗೆ ಕಾರಣವಾದ 'ಶುಕ್ರ'ವೆಂದರೇನು? ತಾರುಣ್ಯದಲ್ಲಿ ಉತ್ಪನ್ನವಾಗುವ ವೀರ್ಯವೆಂದರೇನು? ಎಂದು ವೈದ್ಯ ವಿದ್ಯಾರ್ಥಿಗಳು ಸಂಶಯಕ್ಕೊಳಗಾಗಬಹುದು. ಮತ್ತು ಆಯುರ್ವೇದವು ಅಸಂಗತ ತತ್ವಗಳ ಗಂಟು ಎಂದು

ಹೀಯಾಳಿಸಬಹುದು. ವಸ್ತುತಃ 'ಶುಕ್ರ'ವೆಂಬ ಶಬ್ದವನ್ನು ಬಹುತರವಾಗಿ ತಾರುಣ್ಯದಲ್ಲಿ ಸ್ಖಲಿಸುವ ವೀರ್ಯಕ್ಕೇ ಉಪಯೋಗಿಸುವ ರೂಢಿಯಿದೆ. ಆದರೂ ಧಾತುಶುಕ್ರವೂ ಶರೀರ ಸೃಷ್ಟಿ ಸ್ಥಿತಿಗಳಲ್ಲಿ ಅತಿ ಮುಖ್ಯವಾದ ವಸ್ತುವಾಗಿದೆಯೆಂದೂ ಆ ಧಾತುಶುಕ್ರದಿಂದಲೆ 'ಓಜಸ್ಸೆ'ಂಬ ದೇಹದ ಆರೋಗ್ಯ ಸುಖಗಳಿಗೆ ಕಾರಣವಾದ ವಸ್ತುವು ಹುಟ್ಟುವುದೆಂದೂ ಹೆಚ್ಚು ಗಂಭೀರವಾಗಿ ಆಯುರ್ವೇದವು ನುಡಿಯುವುದರಲ್ಲಿ ತತ್ತ್ವವಿದೆ. ಧಾತು ಶುಕ್ರ ಹಾಗೂ ಯುವಾಶುಕ್ರಗಳಲ್ಲಿಯ ವ್ಯತ್ಯಾಸವನ್ನು ತಿಳಿಯುವ ಬುದ್ಧಿ ವಿನಯಗಳು ಮಾತ್ರ ಬೇಕು. ಅನೇಕ ಶತಮಾನಗಳಿಂದ ಬೆಳೆದು ಸ್ಥಿರವಾದ ಆಯುರ್ವೇದ ವಿಜ್ಞಾನಕ್ಕೆ ಅಜ್ಞಾನದಿಂದ ಒಮ್ಮೆಲೆ ಹೆಸರಿಡುವ ಸಾಹಸಕ್ಕೆ ಹೋಗಬಾರದು.

ಚೆನ್ನಾಗಿ ಬೆಳೆದ ಮನುಷ್ಯನಲ್ಲಿ ಎರಡು ವಿಧದ ಶುಕ್ರಗಳಿರುತ್ತವೆ. ಒಂದು ಧಾತುಶುಕ್ರ ಇನ್ನೊಂದು ಯುವಾಶುಕ್ರ ಎಂದು. ಅಥವಾ ಧಾತು ಶುಕ್ರವು ಗರ್ಭಧಾರಣೆಯು ಮೊದಲುಗೊಂಡು ಶರೀರವನ್ನು ಕಟ್ಟುತ್ತ ವಿಕಾಸ ಗೊಳಿಸುತ್ತ ಮನುಷ್ಯನನ್ನು ಶೈಶವ ಬಾಲ್ಯಗಳಿಂದ ಸುಸೂತ್ರವಾಗಿ ದಾಟಿಸಿ ತೆಂದರೆ ಆ ಧಾತುಶುಕ್ರದಿಂದಲೆ ಯುವಾಶುಕ್ರವೆಂಬ ಹೊಸ ಟಿಸಿಲೊಂದು ಚಿಗಿತು ಬರುವುದೆಂದು ಬೇಕಾದರೆ ಹೇಳಬಹುದು. ಧಾತುಶುಕ್ರವು ಶೈಶವ ದಿಂದ ಅವ್ಯಕ್ತವಾಗಿಯೆ ತನುಮನಗಳನ್ನು ಅರಳಿಸುತ್ತದಾದ್ದರಿಂದ ಶೈಶವ ಬಾಲ್ಯಗಳನ್ನು ಅಶುಕ್ರಾವಸ್ಥೆ (ಅರ್ಥಾತ್ ಅವ್ಯಕ್ತಶುಕ್ರಾವಸ್ಥೆ) ಎಂದು ನಾವು ಕರೆದೆವು. ಮುಂದೆ ಕೌಮಾರಾವಸ್ಥೆಯಲ್ಲಿ ಹುಡುಗ ಹುಡುಗಿಯರಲ್ಲಿ ವೀರ್ಯ ಸ್ಖಲನ, ಮುಟ್ಟುಗಳು ಪ್ರಾರಂಭವಾದವೆಂದರೆ ಅವರಿಗೆ ಸಶುಕ್ರಾವಸ್ಥೆ (ಅರ್ಥಾತ್ ವ್ಯಕ್ತಶುಕ್ರಾವಸ್ಥೆ) ಬಂತೆಂದು ನಾವೆನ್ನುವೆವು. ಈ ಆಯುರ್ವೇದೀಯ ವಿಚಾರ ಗಳಿಗೆ ಆಧುನಿಕ ವಿಜ್ಞಾನವೂ ಬೆಂಬಲ ಕೊಡುತ್ತದೆಂಬುದು ಮುಂದಿನ ವಿವೇಚನದಿಂದ ಸ್ಪಷ್ಟವಾಗುವದು.

ನಮ್ಮ ದೇಹದಲ್ಲಿ ಜಠರ, ಯಕೃತ್, ಕರುಳು, ಹೃದಯ, ಮಿದುಳು, ಪುಪ್ಪುಸ ಎಂಬ ಅಂಗಗಳು ಇರುವವೆಂಬುದನ್ನು ನೀವು ಬಲ್ಲಿರಿ. ಅವುಗಳಂತೆ 'ಓಜೋಗ್ರಂಥಿ'ಗಳೆಂಬ ಬೇರೆ ಕೆಲವು ಅಂಗಗಳೂ ಇವೆ. ಇವಕ್ಕೆ ನಾಳರಹಿತ ಗ್ರಂಥಿ, ಅಂತಃಸ್ರಾವಕಗ್ರಂಥಿಗಳೆಂದೂ ಕರೆಯುವುದುಂಟು. ಏಕೆಂದರೆ ಮೊದಲು

ಆ ಗ್ರಂಥಿಗಳ ಕಾರ್ಯೋಪಯೋಗಗಳು ಶರೀರವಿಜ್ಞಾನಿಗಳಿಗೆ ತಿಳಿದಿರಲಿಲ್ಲ. ಅವುಗಳಿಗೂ ಬೇರೆ ಅಂಗಗಳಿಗೂ ನಲಿಕೆಗಳ ಮೂಲಕವಾಗಿ ಅಥವಾ ರಸ ಸ್ರಾವಗಳ ಮೂಲಕವಾಗಿ ಯಾವ ಸಂಬಂಧವೂ ವ್ಯಕ್ತವಾಗಿರಲಿಲ್ಲ. ಕ್ರಮೇಣ ಅವುಗಳಿಗೆ ತಗಲುವ ಬೇನೆಗಳಿಂದ ಇಲ್ಲವೆ ಅವುಗಳನ್ನು ಶಸ್ತ್ರಚಿಕಿತ್ಸೆಯಲ್ಲಿ ಕಿತ್ತೊಗೆಯುವುದರಿಂದ ದೇಹದ ಮಿಕ್ಕ ಅಂಗಗಳ ಮೇಲೆ ಪರಿಣಾಮವಾಗುವುದು ಕಂಡುಬಂತು. ಆದುದರಿಂದ ವಿಜ್ಞಾನಿಗಳಿಗೆ ಆ ಗ್ರಂಥಿಗಳಿಂದ ಒಂದು ದ್ರವ್ಯರಸವು ಸ್ರವಿಸಿ ರಕ್ತದಲ್ಲಿ ಸೇರಿ ಸಮಗ್ರ ದೇಹದ ಮೇಲೆ ಪರಿಣಾಮವನ್ನು ಉಂಟುಮಾಡುತ್ತಿರಬೇಕೆಂದು ಹೊಳೆಯಿತು. ಆದುದರಿಂದಲೆ ಅವಕ್ಕೆ ಅಂತಃಸ್ರಾವಕಗ್ರಂಥಿ (Endocrines) ಗಳೆಂದು ಹೆಸರಿಟ್ಟರು. ನಂತರ ವಿಜ್ಞಾನಿಗಳ ಅವಿಶ್ರಾಂತ ಪರಿಶ್ರಮದಿಂದ ದೇಹದ ಮೂಲೆಮೂಲೆಗಳಲ್ಲಿ ಅವಿತುಕೊಂಡಿರುವ ಗೂಢಗ್ರಂಥಿಗಳು ಬೆಳಕಿಗೆ ಬಂದು ಮನುಷ್ಯನ ದೇಹ, ಮನಸ್ಸು, ಬುದ್ಧಿಗಳು ಅವುಗಳ ಅಂಕೆಯಲ್ಲಿರುವವೆಂದು ಸಿದ್ಧವಾಯಿತು. ನಮ್ಮ ಬಾಳಿನ ಹಣೆಬರಹವೆಲ್ಲ ಆ ಗ್ರಂಥಿಗಳಲ್ಲಿಯೆ ಅಡಗಿದೆಯೆಂದು ಇಂದು ವಿಜ್ಞಾನಿಗಳೆನ್ನುತ್ತಿದ್ದಾರೆ.

ಮಿದುಳಿನ ಮೇಲ್ಭಾಗದಲ್ಲಿ ಪೀನಿಯಲ್, ಬುಡದಲ್ಲಿ ಪಿಟ್ಯುಯಿಟರಿ, ಕುತ್ತಿಗೆಯಲ್ಲಿ ಥಾಯ್‌ರಾಯ್ಡ್, ಎದೆಯಲ್ಲಿ ಥಾಯ್‌ಮಸ್, ಕಟಿಪ್ರದೇಶದಲ್ಲಿ ಗಂಡಿಗೆ ಅಂಡಗಳು (Testes) ಹೆಣ್ಣಿಗೆ ಡಿಂಭಗಳು (Ovaries) ಅಲ್ಲದೆ ಸ್ತನ, ಯಕೃತ್, ಪ್ಲೀಹ, ಮೇದೋಜೀರಕ ಎಂಬವೂ ಅಂತಃಸ್ರಾವಕ ಗ್ರಂಥಿಗಳಾಗಿವೆ. ಆ ಎಲ್ಲ ಗ್ರಂಥಿಗಳೂ ತಮ್ಮ ಕಾರ್ಯ, ಶಕ್ತಿ, ವೇಗಗಳಲ್ಲಿ ಒಂದನ್ನೊಂದು ಹೊಂದಿಕೊಂಡಿವೆ. ಅವೆಲ್ಲವೂ ಸಾಮರಸ್ಯದಿಂದ ಕೆಲಸ ಮಾಡಿದರೆ ಜೀವನವು ಸುಸೂತ್ರವಾಗಿ ಸಾಗುವುದು. ಅವುಗಳಲ್ಲಿ ಒಂದು ದೂಷಿತವಾದರೆ ಮಿಕ್ಕವುಗಳ ಸ್ವಾಸ್ಥ್ಯಕ್ಕೂ ಬಾಧೆ ಬರುವುದು. ಈ ಗ್ರಂಥಿಗಳ ಗುಣಸ್ವಭಾವಗಳು ಆಯುರ್ವೇದದಲ್ಲಿಯ 'ಓಜಸ್ಸು' ಎಂಬುದನ್ನು ಹೋಲುತ್ತವಾದ್ದರಿಂದ ನಾವು ಅವನ್ನು 'ಓಜೋಗ್ರಂಥಿ'ಗಳೆಂದು ಕರೆದಿದ್ದೇವೆ.

ಮೇಲ್ಕಂಡ ಗ್ರಂಥಿಗಳಲ್ಲಿ ಪಿಟ್ಯುಯಿಟರಿ, ಥಾಯ್‌ರಾಯ್ಡ್, ಥಾಯ್‌ಮಸ್ಸಗಳು ವಿಶೇಷವಾಗಿ ಕಾಮಜೀವನಕ್ಕೆ ಸಂಬಂಧಿಸಿವೆ. ಅವೆಲ್ಲವೂ ಹುಟ್ಟಿದಂದಿನಿಂದ ಅಂತಃಸ್ರಾವವನ್ನು ರಕ್ತದಲ್ಲಿ ಬಸಿಯುತ್ತಲೆ ಇರುತ್ತವೆ. ಅವುಗಳಲ್ಲಿ ಪಿಟ್ಯುಯಿಟರಿಯು ಹಿರಿಯ ಗ್ರಂಥಿಯೆನ್ನಬಹುದು. ಮಿಕ್ಕೆಲ್ಲ ಗ್ರಂಥಿಗಳ

ಕಾರ್ಯಸೂತ್ರವು ಪಿಟ್ಯುಯಿಟರಿಯ ಕೈಯಲ್ಲಿದೆಯೆಂದು ತಜ್ಞರು ಅಭಿಪ್ರಾಯ ಪಡುತ್ತಾರೆ. ಅದರಿಂದ ಪ್ರಾಮುಖ್ಯವಾಗಿ ಎರಡು ಪ್ರಕಾರದ ಅಂತಃಸ್ರಾವಗಳಾಗುತ್ತವೆ. ಬೆಳಿಗೆಗೆ ಸಾಧಕವಾದುದೊಂದು (Growth harmone), ಕಾಮಸಾಧಕವಾದುದಿನ್ನೊಂದು (Sex harmone). ಬೆಳಿಗೆಗೆ ಸಾಧಕವಾದ ಸ್ರಾವವು ಆಯುರ್ವೇದದ ಸಪ್ತಧಾತುಗಳಲ್ಲೊಂದಾದ ಶುಕ್ರವಾಗಿದೆ. ಆ ಧಾತುಶುಕ್ರವು ಇಡಿ ದೇಹದಲ್ಲಿಯ ಓಜೋಗ್ರಂಥಿಗಳಿಂದ ಹುಟ್ಟುವ ಅಂತಃಸ್ರಾವದ ಮಿಶ್ರಣವೆನ್ನಬಹುದು. ಅದೆ ಗರ್ಭದಿಂದಾರಂಭಿಸಿ ಶರೀರವನ್ನು ರಚಿಸಿ ಬೆಳೆಸುವ ದಿವ್ಯಧಾತುವಾಗಿದೆ. ಆ ಧಾತುಶುಕ್ರದಿಂದ ಎಲ್ಲ ಅಂಗಗಳಂತೆ ಕಾಮಾಂಗಗಳೂ ಮೆಲ್ಲಗೆ ಬೆಳೆಯುವವು. ಆದರೆ ಎದೆಯಲ್ಲಿಯ ಥಾಯಮಸ್ ಎಂಬ ಓಜೋಗ್ರಂಥಿಯು, ಶೈಶವ ಬಾಲ್ಯಗಳಲ್ಲಿ ಕಾಮವಿಕಾರವು ತಲೆಯೆತ್ತದಂತೆ ತಡೆಯುವುದೆಂದು ಡಾ. ಸಾರ್ಮನ್ ಹೇರನು ಅನ್ನುತ್ತಾನೆ. ಏಕೆಂದರೆ ಥಾರ್ಯಮಸ್ ಗ್ರಂಥಿಯು ಜೀವಿಸಿರುವ ವರೆಗೆ ಕಾಮಜೀವನಕ್ಕೆ ನಿಕಟ ಸಂಬಂಧವುಳ್ಳ ಅಂಡ, ಡಿಂಭಾಶಯ, ಸ್ತನ ಮೊದಲಾದ ಓಜೋಗ್ರಂಥಿಗಳಲ್ಲಿ ವಿಶೇಷವಾದ ಚಟುವಟಿಕೆಯು ವ್ಯಕ್ತವಾಗುವುದಿಲ್ಲ. ಆದರೆ ಕೌಮಾರಾವಸ್ಥೆಯಲ್ಲಿ (೧೨ನೆಯ ವಯಸ್ಸಿನಿಂದ ಮುಂದೆ) ಥಾರ್ಯಮಸ್ ಗ್ರಂಥಿಯು ಕ್ರಮೇಣ ಒಣಗಹತ್ತಿ ಕೊನೆಗೆ ನಿರ್ಜೀವವಾಗಿಬಿಡುವುದು. ಅದು ಒಣಗಹತ್ತಿದಾಗಿನಿಂದಲೆ ಮೂಲ ಧಾತುಶುಕ್ರದ ಪ್ರಭಾವವು ಕಾಮಗ್ರಂಥಿಗಳ ಮೇಲೂ ಬೀಳಲಾರಂಭಿಸುವುದು.

ಆಗ ಸ್ತ್ರೀ ಪುರುಷರ ಕಾಮಗ್ರಂಥಿಗಳಲ್ಲಿ 'ಯುವಾಶುಕ್ರ'ದ ಉದಯವಾಗುವದು. **ಯುವಾಶುಕ್ರವೆಂದರೆ ಪುರುಷ ಜನನೇಂದ್ರಿಯದಿಂದ ಸ್ರವಿಸುವ ವೀರ್ಯವಲ್ಲ; ಸ್ತ್ರೀ ಜನನೇಂದ್ರಿಯದಿಂದ ಸ್ರವಿಸುವ ರಜಸ್ಸೂ ಅಲ್ಲ. ಯುವಾಶುಕ್ರವೆಂದರೆ ಹುಡುಗ ಹುಡುಗಿಯರ ಅಂಡ, ಡಿಂಭಗಳಲ್ಲಿ ಚೈತನ್ಯ, ಚಟುವಟಿಕೆಗಳನ್ನು ಹೆಚ್ಚಿಸಿ ರಜೋವೀರ್ಯಗಳ ನಿರ್ಮಾಣಕ್ಕೆ ಪ್ರೇರಣೆಯನ್ನು ಕೊಡುವ ಓಜೋಗ್ರಂಥಿಗಳ ಕಾಮರಸವಾಗಿದೆ.** ಈವರೆಗೆ ಬಾಲ ಬಾಲಿಕೆಯರ ಧಾತುಶುಕ್ರವೊಂದೆ ಶರೀರವಿಕಾಸವನ್ನು ಸಾಧಿಸುತ್ತಿತ್ತು. ಈಗ ಧಾತುವೃಕ್ಷಕ್ಕೆ 'ಯುವಾಶುಕ್ರ'ದ ಚಿಗುರೊಡೆಯಿತು. ಅದರೊಂದಿಗೆ ಕುಮಾರ ಕುಮಾರಿಯರಲ್ಲಿ ಕಾಮಪ್ರವೃತ್ತಿಯ ನೆಲೆಯೂ ಸ್ಫುರಿಸಿತು.

ಹುಡುಗನ ಅಂಡಗಳಲ್ಲಿ ಪುರುಷ ಶುಕ್ರವು ಸ್ರವಿಸಿ ರಕ್ತದಲ್ಲಿ ಮಿಶ್ರ ವಾಗಿ ತನುಮನಗಳಲ್ಲಿ ಗಂಡು ಆಕಾರ ಸ್ವಭಾವಗಳನ್ನು ಬಲಗೊಳಿಸುವದು. ಈವರೆಗೆ ಮುಗ್ಧನಾಗಿದ್ದ ಬಾಲಕನು ಈಗ ಸಾಹಸಿಯಾಗುವನು; ಆಕ್ರಮಣ ಶೀಲನಾಗುವನು. ಗಡ್ಡ, ಮೀಸೆಗಳು ತಲೆದೋರುವವು. ಅಧೋರೋಮ ಗಳು ಕಂಡುಕೊಳ್ಳುವವು. ಲಿಂಗ, ಅಂಡಗಳು ಬೆಳೆದು ಬಲಗೊಳ್ಳುವವು. ಧ್ವನಿಯೊಡೆಯುವದು. ಅಂಡಗಳಲ್ಲಿ ಬೀಜಾಣುಗಳು ಹುಟ್ಟಿ, ಬೇರೆ ಕೆಲವು ರಸಗಳೊಡನೆ ಸೇರಿ ವೀರ್ಯವಾಗಿ ವೀರ್ಯಾಶಯದಲ್ಲಿ ಸಂಗ್ರಹವಾಗಹತ್ತು ವದು. ಸ್ವಪ್ನಸ್ಖಲನವು ಆರಂಭವಾಗುವದು.

ಕುಮಾರಿಯ ಡಿಂಭಾಶಯಗಳಲ್ಲಿ ಸ್ತ್ರೀ ಯುವಾಶುಕ್ರವು ಸ್ರವಿಸಿ ರಕ್ತದಲ್ಲಿ ಬೆರೆತು ಅವಳ ತನುಮನಗಳಲ್ಲಿ 'ಹೆಣ್ಣಿನ'ನ ಆಕಾರ ಸ್ವಭಾವ ಗಳನ್ನು ಬಲಗೊಳಿಸುವದು ಈವರೆಗೆ ಸ್ತ್ರೀ ಪುರುಷರ ಭೇದವಿಲ್ಲದೆ ನಿರ್ಲಿಂಗಿಯಂತೆ ಬೆಳೆದು ಆಡಿ ಕುಣಿದ ಹುಡುಗಿಯು ಈಗ ಶಾಂತಳೂ ಗಂಭೀರಳೂ ಆಗುವಳು. ಶುಕ್ರೋದಯವಾದ ಮೇಲೆ ಕುಮಾರಿಯ ಶರೀರ ವಿಕಾಸವು ಕುಮಾರರಿಗಿಂತ ತೀವ್ರವಾಗಿ ಆಗುವದು. ಯೋನಿಯು ವಿಕಾಸಗೊಳ್ಳುವದು. ಗರ್ಭಾಂಗಗಳಲ್ಲಿ ಚಟುವಟಿಗೆ ಪ್ರಾರಂಭವಾಗುವದು. ಮೊಲೆಗಳು ದುಂಡಾಗಿ ಬೆಳೆದು ತೊಟ್ಟುಗಳ ಸುತ್ತಲೂ ಶ್ಯಾಮ ವರ್ಣ ವೇರುವದು. ದೇಹದಲ್ಲಿ ತುಸು ಕೊಬ್ಬು ಸಂಚಯಿಸುವುದಲ್ಲದೆ ಮೈಬಣ್ಣವು ಮೋಹಕವಾಗಿ ಕೆನ್ನೆಗೆ ಕೆಂಪೇರುವದು. ಡಿಂಭಾಶಯಗಳಲ್ಲಿ ಡಿಂಭಾಣು ಗಳು ಹುಟ್ಟಿ ಮುಟ್ಟು ಪ್ರಾರಂಭವಾಗುವದು.

ಕುಮಾರನಲ್ಲಿ ವೀರ್ಯವೂ, ಕುಮಾರಿಯಲ್ಲಿ ಮುಟ್ಟೂ ಆರಂಭ ವಾಗುವದು ಯೌವನದ ಪೂರ್ವ ಲಕ್ಷಣಗಳಾಗಿವೆ. ಹುಡುಗ ಹುಡುಗಿಯರ ಜೀವನದಲ್ಲಿ ಇದೊಂದು ಮಾರ್ಮಿಕ ಸಮಯ. ಆಗ ಉಭಯಲಿಂಗಿಗಳಲ್ಲಿ ಮೋಹಾಕರ್ಷಣೆಯು ಹುಟ್ಟುತ್ತದೆ. ಕಾಮೋದಯವಾಗುತ್ತದೆ. ಓಜೋ ಗ್ರಂಥಿಗಳು ಸ್ರವಿಸಿದ ( ಯುವಾ ) ಶುಕ್ರದ ಗೂಢಾಮೃತವನ್ನು ಸವಿದ ಯುವಕಯುವತಿಯರ ಅಂಗಾಂಗಗಳಲ್ಲಿ ಕಾಮಲಹರಿಯು ಹರಿದಾಡುವದು. ಕಾಮಾಂಗಗಳು ಬಲಿತು ಸರ್ವಾಂಗಕ್ಕೂ ತಮ್ಮ ಸೂಕ್ಷ್ಮ ಸ್ರಾವವನ್ನು ಹರಿಯಿಸಿದವೆಂದರೆ ಗಂಡಿಗೆ ಹೆಣ್ಣಿನ ವಿಷಯದಲ್ಲಿ ಹೆಣ್ಣಿಗೆ ಗಂಡಿನ ವಿಷಯ

ದಲ್ಲಿ ಒಂದು ಸವಿಯಾದ ಒಲವಿನ ಅನುಭವವಾಗುವದು. ಇಬ್ಬರಿಗೂ ಯಾರೋ ತಮ್ಮನ್ನು ಹತ್ತರ ಹತ್ತರ ನೂಕುತ್ತಿರುವರೆಂದು ಅನಿಸುವದು. ಮನಸ್ಸು ಒಮ್ಮೆ ಬೇಡವೆಂದರೂ ಮತ್ತೊಮ್ಮೆ ಒಬ್ಬರನ್ನೊಬ್ಬರು ನೋಡುತ್ತಲಿ ಇರುವರು. ಕಣ್ಣು ಮುಚ್ಚಿದರೂ ಚಿತ್ತಸೃಷ್ಟಿಯಲ್ಲಿ ಒಬ್ಬರನ್ನೊಬ್ಬರು ಸುಂದರವಾಗಿ ಚಿತ್ರಿಸಿಕೊಳ್ಳುತ್ತಲಿ ಇರುವರು; ಪರಸ್ಪರ ಸಹವಾಸ ಸ್ವಪ್ನಗಳಲ್ಲಿ ಮೈಮರೆಯುವರು. ಅನೇಕ ಸುಖದ ಕಲ್ಪನೆಗಳು ಹುಟ್ಟಿ ರೋಮಾಂಚಿತರಾಗುವರು. ಸಾರಾಂಶ, ಈವರೆಗೆ ಸ್ವಲಿಂಗಿ ವ್ಯಕ್ತಿಗಳೊಡನೆ ಕಲೆತು, ಆಡಿ, ಕುಣಿದು ಮೈಮರೆತ ಬಾಲಬಾಲಿಕೆಯರ ಜೀವನಕ್ಷೇತ್ರದಲ್ಲಿ ಶುಕ್ರೋದಯವಾಗಿನಿಂದ ಪ್ರತಿಲಿಂಗಿ ವ್ಯಕ್ತಿಗಳು ಪ್ರಾಮುಖ್ಯತೆಯನ್ನು ಪಡೆಯಹತ್ತುವವು. ಮತ್ತು ಆ ಪ್ರತಿಲಿಂಗಿಗಳಲ್ಲಿ ಕೆಲವರಿಂದ ವಿಶೇಷವಾಗಿ ಆಕರ್ಷಿತರಾಗಿ ಅವರ ಸಾಮೀಪ್ಯ ಸಹವಾಸಗಳಿಗಾಗಿ ಕಾತರಿಸಲಾರಂಭಿಸುವರು.

ಶುಕ್ರೋದಯದ ಸಮಯವೆಂದರೆ ಯುವಕ ಯುವತಿಯರ ಜೀವನದಲ್ಲಿ ಒಂದು ಸಂಕ್ರಾಂತಿ ಕಾಲ. ಆಗ ಅವರ ತನುಮನಗಳ ಸ್ವಭಾವವೇಗಗಳಲ್ಲಿ ಒಂದು ಕ್ರಾಂತಿಯುಂಟಾಗುವದು. ನಾಡಿ ನಾಡಿಗಳಲ್ಲಿ ಕ್ರಾಂತಿಗೀತೆಯು ಪ್ರತಿಧ್ವನಿಸುವದು. ನರಗಳು ಉದ್ದೀಪನಶೀಲವಾಗುವವು. ರಕ್ತದಲ್ಲಿ ಯುವಾಶುಕ್ರದ ನವರಸಾಯನವು (Chemical) ಉಕ್ಕೇರಿ ಸಪ್ತಧಾತುಗಳಿಗೂ ಆ ಕ್ರಾಂತಿಯನ್ನು ಸಾಗಿಸುವದು. ಮಿದುಳಿನ ಚಕ್ರವು ಯೌವನದ ಬಿರುಗಾಳಿಯಿಂದ ಅಸುಗೊಳ್ಳದ ವೇಗದಿಂದ ತಿರುಗುವದು. ಅದರಿಂದ ಹರೆಯದಲ್ಲಿ ಶಾಂತಿ ಸ್ತಿಮಿತತೆಗಳು ಇಲ್ಲದಂತಾಗಿ ಮನವು ಭವ್ಯ, ದಿವ್ಯ, ಅತರ್ಕ್ಯ—ಅಗಮ್ಯ ಕಲ್ಪನೆಗಳ ಕಾರಖಾನೆಯಾಗುವದು. ಸೊಬಗು, ಸೊಗಸುಗಳ ಕಡೆಗೆ ಸಾಹಸೋಲ್ಲಾಸಗಳ ಕಡೆಗೆ ಚಿತ್ತವು ಕಾಲಬಂಧನಗಳನ್ನು ಲೆಕ್ಕಿಸದೆ ಹಾರಿಹೋಗುವದು. ಆಗ ಹರೆಯರು ಕಿರಿತನದ ತಿಟ್ಟಿದಿಂದ ಹಿರಿತನದ ಬೆಟ್ಟಕ್ಕೇರಿದೆವೆಂದು ಹೆಮ್ಮೆ ಪಡುವರು. ಹಿರಿಯರ ಮಾತು ರೀತಿಗಳು, ನಿಯಮ ನೀತಿಗಳು ಹರೆಯರ ಉದ್ದೀಪಿತ ಚಿತ್ತಕ್ಕೆ ಗೊಡ್ಡು ದಡ್ಡಿಗಳೆನಿಸುವವು. 'ಮೀಸೆ ಬಂದ ಮೇಲೆ ದೇಶ ಕಾಣುವದಿಲ್ಲ; ಮೊಲೆ ಬಂದ ಮೇಲೆ ನೆಲ ಕಾಣುವದಿಲ್ಲ' ಎಂಬ ಮಾತು ಯುವಕ ಯುವತಿ

ಯರ ತನುಮನದ ರಂಗಗಳೆರಡನ್ನೂ ವರ್ಣಿಸುವ ನಾಣ್ಣುಡಿಯಾ
ಒಟ್ಟಿನಲ್ಲಿ ಶುಕ್ರೋದಯ ಕಾಲದಲ್ಲಿ ಹುಡುಗ ಹುಡುಗಿಯರ ತನುಮ
ವ್ಯಕ್ತಿತ್ವವು ತಂತಿಗಳನ್ನು ಬಿಗಿದಿಟ್ಟ ವೀಣೆಯಂತಾಗುವದು. ತೀರ ಕ್ಷ
ವಸ್ತುವಿನ ಸ್ಪರ್ಶದಿಂದಲೂ ತಂತಿಗಳು ಸ್ಪಂದಿಸಿ ಸ್ವರಾಪಸ್ವರಗಳನ್ನು
ಯುವವು. ಆದರೆ ಅದೇ ವೀಣೆಯು ಕಲಾ ( ಗಾನ ) ಯೋಗಿಯ
ಹೋದರೆ ಅವೆ ತಂತಿಗಳು ಜಗನ್ಮೋಹಕವಾದ ರಾಗವನ್ನೂ ನು
ಬಹುದು. ಅಂಥ ಯೋಗಿಯ ಸಹವಾಸ, ಗಂಭೀರ ಪ್ರೇಮದ ಸಂ
ವಾಗುವ ವರೆಗೆ ಹರೆಯರ ನಾಡಿಗಳಲ್ಲಿ ಯೌವನದ ಕುಕ್ಕೋಟವು ಅನಿ
ವಾಗುವದು.

ಹೀಗೆ ಹರೆಯದ ಬಿಗುಹಿನಿಂದ, ಹುಮ್ಮಸ್ಸಿನಿಂದ ನಾನೇ
ವೆಂಬ ಭಾವದಿಂದ ನಲಿವ ತರುಣ ತರುಣಿಯರಲ್ಲಿ ಒಕಸ್ಮಾತ್ತಾಗಿ ಕೆ
ಶಾರೀರಿಕ ಕ್ಷೋಭೆಗಳುಂಟಾಗುವವು. ಅವು ಕ್ಷಣಿಕಕ್ಷೋಭೆಗಳಾ
ಅವುಗಳಲ್ಲಿ ಅವರ್ಣನೀಯವಾದ ಸುಖವೂ ಇರುತ್ತದೆ. ಅಂಥ ಸುಖ
ಭವವು ಒಂದು ಸಲ ಮಿಂಚಿಹೋದ ಮೇಲೆ ಮತ್ತೆ ಮತ್ತೆ ಅದನ್ನೆ
ಸುವಂತೆ ಯುವಕ ಯುವತಿಯರ ಮನಸ್ಥಿತಿಯುಂಟಾಗುವದು. ಆ ಕ್ಷೋ
ಗಳಿಗೆ ( Growing pains ) ಎಂದರೆ ಬೆಳೆಗೆಯ ಬೇನೆಗಳೆಂದು ಇಂ
ನಲ್ಲಿ ಹೇಳುತ್ತಾರೆ. ಕುಮಾರ ಕುಮಾರಿಯರು ಯೌವನದಲ್ಲಿ ಕಾ
ವಾಗ ಅವರ ಅಂತರಂಗಗಳಲ್ಲಿ ಕೆಲವು ಸ್ಥಿತ್ಯಂತರಗಳಾಗುವವು. ಆ ಸ್ಥಿ
ತರಗಳಿಂದ ಹುಡುಗ ಹುಡುಗಿಯರಲ್ಲಿ ನೋವಿನಿಂದ ಕೂಡಿದ ಸುಖ
ದನೆಗಳಾಗಬಹುದು. ಕುಮಾರರ ಅಂಡಗಳಲ್ಲಿ ವೀರ್ಯವು ಹನಿಹನಿಯ
ಹುಟ್ಟಿ ವೀರ್ಯನಲಿಕೆಯ ಮೂಲಕ ವೀರ್ಯಾಶಯದಲ್ಲಿ ತುಂಬಿಕೊ
ವಾಗ ಕೆಲವರಿಗೆ ಅಸ್ಪಷ್ಟವಾದ ಅಂಡಶೂಲೆ, ಹೊಟ್ಟೆಶೂಲೆಗಳಾಗುವದು
ಅದೇ ಸಮಯಕ್ಕೆ ಅವರ ನರಮಂಡಲವೆಲ್ಲ ಉದ್ರಿಕ್ತವಾಗಿ ಆನಂದೋ
ಗಳು ನಲಿದಾಡುತ್ತಿರುವದರಿಂದ ಆ ಬೇನೆಗಳ ವಿಷಯದಲ್ಲಿ ಹುಡು
ಹಿರಿಯರಲ್ಲಿ ದೂರು ಹೇಳುವ ಸಂಭವವಿಲ್ಲ. ಈವರೆಗೆ ಶೈಶವದಲ್ಲಿ
ಮಲಮೂತ್ರ ನಿರೋಧಗಳಿಂದ ಲಿಂಗೋದ್ರೇಕವಾಗುತ್ತಿದ್ದುದು ಈಗ ನಿ
ರಣವಾಗಿ ಮೇಲಿಂದ ಮೇಲೆ ಇಂದ್ರಿಯವು ಉದ್ರೇಕಗೊಳ್ಳುವದು. ಸ್ತ್ರೀ

# ಓಜೋಗ್ರಂಥಿಗಳು (೩೬ನೆಯ ಪುಟದಲ್ಲಿ)




೧ ಪೀನಿಯಲ್ ೨. ಪಿಟ್ಯುಯಿಟರಿ ೩. ಥೈರಾಯ್ಡ್ ೭ ಅಧಿವೃಕ್ಕ
೮ ಡಿಂಭಾಶಯ–ಅಂಡ ೯. ಸ್ತನ

## ಪುರುಷೇಂದ್ರಿಯ (೯೧ ನೆಯ ಪುಟದಲ್ಲಿ)




೧. ಅಂಡ ೨ ಬೀಜಕೋಶ ೩. ಪ್ರಸ್ಥಿತಗ್ರಂಥಿ. ೪ ವೀರ್ಯಕೋಶ. ೫. ಮೂತ್ರಕೋಶ.

---

## ಸ್ತ್ರೀಯ ಇಂದ್ರಿಯ (೯೨ನೆಯ ಪುಟದಲ್ಲಿ)




೧. ಡಿಂಭನಾಳ. ೨. ಡಿಂಭಾಶಯ. ೩. ಗರ್ಭಾಶಯ. ೪. ಯೋನಿಮಾರ್ಗ

ದರ್ಶನ ಸ್ಪರ್ಶನಗಳಿಂದಲೂ ಅಲ್ಲದೆ ಸ್ಮರಣದಿಂದಲೂ ಕೂಡ ಲಿಂಗವು ಉದ್ರಿಕ್ತವಾಗುವುದು. ಪ್ರಾರಂಭದ ಉದ್ರೇಕಗಳಲ್ಲಿ ತುಸು ನೋವಿರುವು ದಾದರೂ ಅದರಲ್ಲಿ ನೈಸರ್ಗಿಕವಾದ ಒಂದು ಸುಖವೂ ಇರುವುದರಿಂದ ತರುಣನ ಲಕ್ಷ್ಯವು ಕಾಮಾಂಗಗಳ ಕಡೆಗೆ ಹೊರಳುವದು. ಈ ಉದ್ರೇಕ ಗಳು ವೀರ್ಯಸಂಗ್ರಹದ ಲಕ್ಷಣಗಳಾಗಿವೆ. (ವೀರ್ಯ ನಿರ್ಮಾಣ ಮತ್ತು ಸಂಗ್ರಹದ ಕ್ರಮವನ್ನು ಮುಂದೆ 'ಪರಿಣಾಮ' ಎಂಬ ಪ್ರಕರಣದಲ್ಲಿ ವಿವರಿಸ ಲಾಗಿದೆ). ವೀರ್ಯಸಂಗ್ರಹದ ಪರಿಣಾಮವಾಗಿ ಸ್ತ್ರೀ ವಿಷಯಕ ಕಾಮುಕ ಸ್ವಪ್ನಗಳೂ ಬೀಳುವವು. ಹೀಗೆ ಕಾಮವಿಕಾರವು ವಿಕಸಿತವಾಗುತ್ತ ಕೊನೆ ಗೊಂದು ದಿನ ಯಾವದಾದರೊಂದು ಕಾರಣದಿಂದ ಸಮಗ್ರ ಶರೀರಕ್ಕೆ ರೋಮಾಂಚನವನ್ನುಂಟುಮಾಡುವಂತೆ ವೀರ್ಯಸ್ಖಲನವಾಗುವದು. ಆ ದಿನ ಸ್ಖಲನದ ಪೂರ್ವದಲ್ಲಿ ಉಂಟಾದ ಲಿಂಗೋದ್ರೇಕ ಹಾಗೂ ಸ್ಖಲನ ಕಾಲದಲ್ಲಿ ನಡೆಯುವ ನರಗಳ ಸ್ಫುರಣಗಳು ಯುವಕನಿಗೆ ನಿಜವಾಗಿಯೂ ಬಣ್ಣಿಸ ಲರಿಯದ ಮೋಹಕವಾದ ಆನಂದವನ್ನು ಕೊಡುವವು. ಯುವತಿಯರ ಲ್ಲಿಯೂ ಪ್ರಥಮ ಋತುವಾಗುವಾಗ ಕೆಲವು ಶಾರೀರಿಕ ಸುಖ ದುಃಖ ಮಿಶ್ರಿತ ಸಂವೇದನೆಗಳಾಗುವವು. **'ಕ್ಷಾಮಪ್ರಸನ್ನವದನಾಂ ಸ್ಫುರತ್ ಶ್ರೋಣಿ ಪಯೋಧರಾಮ್ । ಸ್ರಸ್ತಾಕ್ಷಿಕುಕ್ಷೀಂ ಪುಂಸ್ಕಾಮಾಂ ವಿದ್ಯಾದೃತು ಮತೀಂ ಸ್ತ್ರಿಯಮ್** ಎಂದರೆ ತುಸು ಇಳಿದರೂ ಪ್ರಫುಲ್ಲವಾದ ಮುಖ ಮುದ್ರೆ, ಮೊಲೆ ಮತ್ತು ಕಟಿಪ್ರದೇಶದಲ್ಲಿ ಉದ್ದೀಪನ, ಅರೆದೆರೆದ ನೇತ್ರ ಮತ್ತು ಪುರುಷರನ್ನು ಕಾಮಿಸುವುದು ಋತುಲಕ್ಷಣವಾಗಿವೆಯೆಂದು ಆಯು ರ್ವೇದವು ಹೇಳುತ್ತದೆ. ತೋರಿಕೆಗೆ ಪ್ರಥಮ ಸ್ಖಲನವು ಅನೇಕ ಕಾರಣ ಗಳಿಂದ ಆಗಬಹುದು. ಒಬ್ಬ ವಿದ್ಯಾರ್ಥಿಯು ಹದಿನಾರನೆ ವರ್ಷದಲ್ಲಿ ಆದ ಪ್ರಥಮ ಸ್ಖಲನವನ್ನು ತಾನೇ ಹೀಗೆ ಹೇಳಿದ್ದಾನೆ :—

'ಚಳಿಗಾಲದಲ್ಲಿ ಒಂದು ದಿನ ನಾನು ಹೊರಗಿನಿಂದ ಮನೆಗೆ ಬರು ವಾಗ ನಮ್ಮ ಮನೆಯ ಪಕ್ಕದಲ್ಲಿ ಕೆಳಗೆ ಒಬ್ಬ ಮೋಹಕಳಾದ ನವ ಯುವತಿಯು ಮೂತ್ರವನ್ನು ವಿಸರ್ಜಿಸುವುದು ಅಕಸ್ಮಾತ್ತಾಗಿ ನನ್ನ ಕಣ್ಣಿಗೆ ಬಿತ್ತು. ಕೂಡಲೆ ನನ್ನ ಇಂದ್ರಿಯವು ಉದ್ರೇಕಗೊಂಡಿತಲ್ಲದೆ ಒಮ್ಮೆಲೆ ನಾನು ಅಲ್ಲಿಂದ ಕಾಲ್ತೆಗೆದೆ. ಮುಂದೆ ಕೆಲವು ನಿಮಿಷಗಳಲ್ಲಿ ನನ್ನ ಇಂದ್ರಿಯ

ದಿಂದ ನಿಂತು ನಿಂತು ಅರ್ಧಪ್ರವಾಹಿಯಾದ ವಸ್ತುವು ಹೊರಬೀಳಹತ್ತಿತು. ಅದನ್ನು ತಡೆಯಬೇಕೆಂದು ಎಷ್ಟು ಯತ್ನಿಸಿದರೂ ಅದು ನನ್ನ ಅಂಕೆಮೀರಿ ಹೋಗಹತ್ತಿತು. ಆಗ ನನಗಾದ ಆನಂದವು ಅಂಥ ಅನುಭವವನ್ನು ಹೊಂದಿದವರಿಗಷ್ಟೆ ಗೊತ್ತಾಗಬಹುದು. ಅದು ಹೋದ ನಂತರ ನನ್ನ ಮನಸ್ಸಿನ ಮೇಲಿನ ಒಂದು ದೊಡ್ಡ ಭಾರವನ್ನಿಳಿಸಿದಂತೆ ನನಗನಿಸಿತು. ಹುರುಪು ಅನಿಸಹತ್ತಿತು. ಮುಂದೆ ಎಷ್ಟೋ ದಿನಗಳವರೆಗೆ ನನಗೆ ಮೇಲಿಂದ ಮೇಲೆ ಇಂದ್ರಿಯದ ಕಡೆಗೆ ಮನಸ್ಸು ಹೋಗಹತ್ತಿತು. ಇದೆ ನನ್ನನ್ನು ಮುಷ್ಟಿ ಮೈಥುನಕ್ಕೆ ದೂಡಿತು.'

ಡಾ. ಲೀಪ್‌ಮನ್ನನಿಗೆ ಹೇಳಿದ ಒಬ್ಬ ಯುವಕನ ಸಂಗತಿ ಹೀಗಿದೆ:— ಮಲ್ಲಕಂಬದಾಟ (climbing pole) ವು ಅವನ ಪ್ರೀತಿಯ ವ್ಯಾಯಾಮವಾಗಿದೆ. ಆದರೂ ಒಂದು ದಿವಸ ಅವನಿಗೆ ಆ ಆಟದಲ್ಲಿ ಹಿಂದೆಂದೂ ಆಗದಷ್ಟು ಆನಂದವಾಯಿತು. ಕಂಬವನ್ನು ಎರಡು ತೊಡೆಗಳಿಂದ ಹಿಡಿದು ಮೇಲೇರುತ್ತಿದ್ದ ಹಾಗೆಯೆ ಅವನ ಇಂದ್ರಿಯವು ಉದ್ರೇಕಗೊಂಡು ಕಾಮಾಂಗಗಳಲ್ಲಿ ಒಂದು ಸುಖಕರವಾದ ಅನುಭವವಾಗಹತ್ತಿತು. ಅದರಿಂದ ಮುಂದೆ ಆ ಸುಖ ಸಂಪಾದನೆಗಾಗಿ ಅವನು ಎಂದಾದರೊಮ್ಮೆ ಕಂಬವನ್ನೇರಲಾರಂಭಿಸಿದನು. ಕ್ರಮೇಣ ಅವನಿಗೆ ಆ ಆಟದಲ್ಲಿ ವೀರ್ಯಸ್ಖಲನವೂ ಆಗಹತ್ತಿತು. ಮುಂದೆ ಕಾಮವಿಕಾರವೆನಿಸಿದಾಗ ಅವನು ಆ ಆಟವನ್ನಾಡಿ ಸ್ಖಲಿಸಿಕೊಂಡು ಆನಂದಪಡುತ್ತಿದ್ದನು. ಅವನು ಮುಷ್ಟಿಮೈಥುನವನ್ನು ಎಂದೂ ಮಾಡಿಕೊಳ್ಳಲಿಲ್ಲ.

ಸಂತೆ, ಜಾತ್ರೆ, ರಥೋತ್ಸವಗಳಲ್ಲಿ ತರುಣಿಯರ ಅಂಗಸ್ಪರ್ಶ ಮಾತ್ರದಿಂದಲೆ ಲಿಂಗೋದ್ರೇಕವನ್ನು ಹೊಂದಿ ಪ್ರಥಮಸ್ಖಲನವನ್ನು ಅನುಭವಿಸಿದ ತರುಣರಿದ್ದಾರೆಂದು ಪ್ರಾಚೀನ ಕಾಮಶಾಸ್ತ್ರಗಳಲ್ಲಿ ವರ್ಣಿಸಲಾಗಿದೆ. ಸೈಕಲ್, ಕುದುರೆ ಸವಾರಿಗಳಿಂದಲೂ ಪ್ರಥಮಸ್ಖಲನದ ಅನುಭವವನ್ನು ಹೊಂದಿದ ತರುಣರಿದ್ದಾರೆ. ನಪುಂಸಕನಾದ ಗಂಡನುಳ್ಳ ಒಬ್ಬ ತರುಣಿಯು ಕುದುರೆ ಹತ್ತಾಡುವದರಿಂದ ಕಾಮಸಂತುಷ್ಟಿಯನ್ನು ಪಡೆಯುತ್ತಿದ್ದಳೆಂದು 'ಸೆಕ್ಸೊಲೊಜಿ' ಯಲ್ಲಿ ಒಬ್ಬ ಡಾಕ್ಟರನು ಬರೆದಿದ್ದಾನೆ. ಹೊಲಿಗೆಯ ಯಂತ್ರದಲ್ಲಿ ಕೆಲಸ ಮಾಡುವದರಿಂದ ತರುಣಿಯರಿಗೆ ಕಾಮೋದ್ರೇಕವಾಗಿ ದ್ರವಿಸುವ

ರೆಂದು ಕಂಡುಬಂದಿದೆ. ಪಾಶ್ಚಾತ್ಯ ಕೆಲವು ಹೊಲಿಗೆಯ ಕಾರಖಾನೆಗಳಲ್ಲಿ ಕೆಲಸ ಮಾಡುತ್ತಿರುವಾಗ ಕೆಲವು ಹುಡುಗಿಯರ ಮೊಗದಲ್ಲಿ ಸ್ಪಷ್ಟವಾಗಿ ಕಾಮುದ್ರಾವಣದ ಲಕ್ಷಣಗಳು ತೋರುವವೆಂದು ಡಾ. ನಾರ್ಮನ್ ಹೇರನು ಅನ್ನುತ್ತಾನೆ. ( ದ್ರಾವಣವೆಂದರೆ ಉದ್ದೀಪಿತವಾದ ಕಾಮುದ ಕಾವು ಕ್ರಮೇಣ ಸುಖಪ್ರದವಾಗಿ ಇಳಿಯುವಿಕೆ ಎಂದರ್ಥ ). ಕಾಮೋದ್ರೇಕಕರವಾದ ಕಾದಂಬರಿಗಳನ್ನು ಓದುವದರಿಂದ, ಸಿನೆಮಗಳಲ್ಲಿಯ ಶೃಂಗಾರಭರಿತ ದೃಶ್ಯ ಗಳನ್ನು ನೋಡುವದರಿಂದ ಅಥವಾ ಅತ್ಯಾನಂದಕರ, ಅತಿ ಉದ್ವೇಗಕರವಾದ ಯಾವುದೊಂದು ಸನ್ನಿವೇಶದಿಂದ ಹುಡುಗರಲ್ಲಿ ಇಂದ್ರಿಯವು ಉದ್ರೇಕಗೊಂಡು ಪ್ರಥಮಸ್ಖಲನವಾಗಬಹುದು; ಹುಡುಗಿಯರಲ್ಲಿ ಉದ್ದೀಪನವಾಗಿ ಕಾಮಾಂಗ ಗಳ ಕಡೆಗೆ ಲಕ್ಷ್ಯಹರಿಯಬಹುದು.

ತರುಣಿಯರ ಗುಹ್ಯಾಂಗಗಳನ್ನು ಅಥವಾ ಎದೆಯನ್ನು ವೈದ್ಯನು ಪರೀಕ್ಷಿಸುವಾಗ ಅವಳ ಯೋನಿಯ ಮೇಲ್ಭಾಗದಲ್ಲಿರುವ ಚಂದ್ರನಾಡಿ ಇಲ್ಲವೆ ಮೊಲೆಗಳಿಗೆ ಕೈ ಸೋಂಕಿದಾಗ ಸುಖಕರವಾದ ಕಾಮೋದ್ದೀಪನವಾಗಿ ನಂತರ ಅದನ್ನು ಪುನಃ ಪುನಃ ಉದ್ದೀಪಿಸಿಕೊಳ್ಳುವ ಪ್ರವೃತ್ತಿಯುಂಟಾಗಬಹುದು. ಒಟ್ಟಿನಲ್ಲಿ ಯಾವುದೊಂದು ಕಾರಣದಿಂದ ಶರೀರ ಗರ್ಭದಲ್ಲಿದ್ದ ಕಾಮುದ ಬುಗ್ಗೆಯೊಡೆದು ಮನಕ್ಕೆ ಹರ್ಷೋತ್ಸಾಹಗಳನ್ನು ಕೊಟ್ಟಿತೆಂದರೆ ತರುಣ ತರುಣಿಯರ ಲಕ್ಷ್ಯವು ಕಾಮಾಂಗಗಳ ಕಡೆಗೆ ಸೆಳೆಯಲ್ಪಡುವದು. ನಂತರ ಅದೆ ಸುಖ ಸನ್ನಿವೇಶಗಳನ್ನು ನೆನಸುವದರಿಂದ ಮತ್ತೆ ಮತ್ತೆ ಅಂತಹ ಸುಖವನ್ನು ಅನುಭೋಗಿಸುವ ಒಲವುಂಟಾಗುವದು. ಹಿಂದಿನ ಅನುಭವದ ಹರ್ಷತರಂಗಗಳು ಜನನೇಂದ್ರಿಯಗಳಲ್ಲಿ ಸ್ಫುರಿಸಿರುವುದರಿಂದ ಆ ಇಂದ್ರಿಯ ಗಳ ಸಂಚಾಲನೆ ಘರ್ಷಣಗಳ ಪ್ರವೃತ್ತಿಯುಂಟಾಗುವದು. ಆ ಪ್ರವೃತ್ತಿ ಯಲ್ಲಿ ಪುನಃ ಸುಖಾನುಭವವೆನಿಸುವದು. ಏಕೆಂದರೆ ಹಿಂದೆ ಹೇಳಿದಂತೆ ಪುರುಷನ ಲಿಂಗದ ತುದಿ, ಸ್ತ್ರೀಯ ಯೋನಿ ಮತ್ತು ಚಂದ್ರನಾಡಿಯು ಕಾಮ ಸುಖಸಂವೇದನೆಯ ಸ್ಥಾನ ( Sensual seats ) ಗಳಾಗಿರುತ್ತವೆ. ಹಲವು ಸಲ ಅವುಗಳ ಚಾಲನ ಘರ್ಷಣಗಳನ್ನು ಅನುಭವಿಸಿದವರಿಗೆ ಅದೊಂದು ಚಟವಾಗುವದು ಸಹಜವಾಗಿದೆ. ಪ್ರಥಮೋದ್ದೀಪನದ ಸನ್ನಿವೇಶವು ಮಾತ್ರ ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿರಬಹುದು. ಡಾ. ಹರ್ಷಫೀಲ್ಡನಿಗೆ

ಒಬ್ಬ ತರುಣಿಯು ತನ್ನ ಚಟದ ಕಾರಣವನ್ನು ಹೀಗೆ ಹೇಳಿದ್ದಾಳೆ:— ಒಂದು ದಿನ ಶಾಲೆಯಿಂದ ಬರುತ್ತಿರುವಾಗ ನನ್ನ ಒಬ್ಬ ಹಿರಿ ಗೆಳತಿಯು ಅದನ್ನು ಮಾಡಿಕೊಳ್ಳುತ್ತಿರುವುದು ನನ್ನ ಗೋಚರಕ್ಕೆ ಬಂತು. ಅದನ್ನು ನೋಡಿದ ಕೂಡಲೆ ನನಗೆ ಹೇಸಿಕೆಯೆನಿಸಿ ಕಣ್ಣುಮುಚ್ಚಿ ಮನೆಗೆ ಬಂದೆ. ಆದರೆ ಆ ನೋಟವು ಮತ್ತೆ ಮತ್ತೆ ನನ್ನ ಮನದೆದುರು ಬಂದು ಏನೋ ಒಂದು ವಿಧದ ಹರ್ಷವನ್ನು ಕೊಡುತ್ತಿತ್ತು. ಅಂದು ರಾತ್ರಿ ಮಲಗಿದ ಮೇಲೆ ಹೊದಿಕೆಯ ಮುಸುಕಿನಲ್ಲಿ ನಾನೆ ಅದನ್ನು ಮಾಡಿಕೊಂಡೆ.

ಕ್ಯಾಥೆರಿನ್ ಡೇವಿ ಎಂಬ ಡಾಕ್ಟರಿಣಿಯು ಈ ವಿಷಯದಲ್ಲಿ ೩೨೨ ತರುಣಿಯರನ್ನು ಪ್ರಶ್ನಿಸಲಾಗಿ ಅವರು ತೀರ ಮೊದಲು ಹಸ್ತಪ್ರಯೋಗಕ್ಕೆ ಪ್ರವೃತ್ತರಾಗಲಿಕ್ಕೆ ಕಾರಣವಾದ ಸನ್ನಿವೇಶಗಳನ್ನು ಹೀಗೆ ವರ್ಗೀಕರಿಸಿದ್ದಾಳೆ. ಏನೋ ತಲೆಯಲ್ಲಿ ಗುಂಗೆನಿಸಿದ್ದರಿಂದ, ನರಮಂಡಲದ ಅತ್ಯುದ್ವೇಗವನ್ನು ಇಳಿಸಲು ಡಾಕ್ಟರರ ಸಲಹೆಯಿಂದ, ಕಾಮುಕ ವಿಚಾರಗಳು ಹೆಚ್ಚಾಗಿ ತಲೆ ತುಂಬಿದುದರಿಂದ, ಪ್ರಿಯಕರನೊಡನೆ ಸಂಭೋಗಿಸಲು ಅವಕಾಶವಿಲ್ಲದ್ದರಿಂದ, ಗಂಡನೊಡನೆ ಸಂಭೋಗಿಸಿದರೂ ತೃಪ್ತಿಯಾಗದ್ದರಿಂದ, ಸ್ವರತಿಯ ವಿಷಯದ ವ್ಯಾಖ್ಯಾನ ಕೇಳಿ ಪರೀಕ್ಷೆ ಮಾಡುವ ಕುತೂಹಲದಿಂದ, ಯಾವುದೊಂದು ಕಾರಣದಿಂದ ಅಕಸ್ಮಾತ್ತಾಗಿ ಯೋನಿಯ ಮೇಲೆ ಘರ್ಷಣ ಸಂಭವಿಸಿದ್ದರಿಂದ, ತುರಿಕೆಯನ್ನು ನಿವಾರಿಸಲಿಕ್ಕೆ ಇಂದ್ರಿಯವನ್ನು ತಿಕ್ಕಿ ತುರಿಸಿದುದರಿಂದ, ಬಹುಶಃ ಕ್ರಿಮಿಗಳಿಂದ ಉಂಟಾದ ಕೆರಳಿಕೆಯಿಂದ, ಬಾಷ್ಪಸ್ನಾನದ ಕಾಲದಲ್ಲಿ ಉತ್ಸುಕತೆಯಿಂದ ಅಂಗಾಂಗಗಳನ್ನು ನಿರೀಕ್ಷಿಸುತ್ತಿರುವಾಗ, ಇಂದ್ರಿಯಕ್ಕೆ ತಾಗುವಂತೆ ವಿಶಿಷ್ಟ ಆಸನಗಳಲ್ಲಿ ಕುಳಿತಾಗ, ಅಂಗಾತ ಮಲಗಿ ಅರೆನಿದ್ದೆಯಲ್ಲಿರುವಾಗ, ಮೆಟ್ಟಿಲುಗಳನ್ನು ವೇಗವಾಗಿ ಇಳಿಯುವಾಗ ಇಲ್ಲವೆ ಗಿಡ ಹತ್ತುವಾಗ, ಚಿಕ್ಕವಳಿದ್ದಾಗ ಒಬ್ಬ ಗಂಡಸು ಇಂದ್ರಿಯವನ್ನು ಸ್ಪರ್ಶಿಸುತ್ತಿದ್ದುದರಿಂದ, ಬಿಗುವಾಗಿ ಕಾಲಮೇಲೆ ಕಾಲನ್ನು ಕತ್ತರಿಯಾಗಿ ಹಾಕಿ ಕೂತಾಗ, ಪ್ರಿಯಕರನ ಸಲಿಗೆ ಆಲಿಂಗನಗಳಿಂದ, ಯೋನಿಯನ್ನು ಪಿಚಕಾರಿಯಿಂದ ತೊಳೆದುಕೊಳ್ಳುತ್ತಿರುವಾಗ ಉಂಟಾದ ಉಲ್ಲಾಸದಿಂದ, ಪ್ರೇಮಕಥೆಗಳನ್ನು ಓದಿದ ಉದ್ವೇಗದಿಂದ, ಕುದುರೆ ಅಥವಾ ಸೈಕಲ್ ಹತ್ತಿದಾಗ, ಅಕಸ್ಮಾತ್ತಾಗಿ ಉಂಟಾದ ಉದ್ದೀಪನದಿಂದ, ನೆಲಕ್ಕೆ ಹೊಟ್ಟೆಹಚ್ಚಿ ಮುಂದೆ

ಸಾಗುತ್ತಿರುವಾಗ, ವಾಹನ ಅಥವಾ ಉಗಿಬಂಡಿಯ ಅಲುಗಾಟದಿಂದ, ಪ್ರಣಯ ಚೇಷ್ಟೆಗಳಿಂದ, ಗೆಳತಿಯನ್ನು ಆಲಿಂಗಿಸಿ ಮಲಗಿರುವಾಗ, ತೊಡೆಗಳ ಮಧ್ಯ ದಲ್ಲಿ ವಸ್ತುಗಳನ್ನು ಹಿಡಿಯಬೇಡಿರೆಂದು ಹಿರಿಯರು ಹೇಳಿದ್ದರಿಂದ ಹಾಗೆ ಮಾಡಿದರೆ ಏನಾಗುತ್ತದೆಂಬ ಕುತೂಹಲದಿಂದ ಇಟ್ಟುಕೊಂಡಾಗ, ಜೀವ ವಿಮೆ ಇಳಿಸುವ ಪೂರ್ವದಲ್ಲಿ ವೈದ್ಯನು ಪರೀಕ್ಷಿಸುವಾಗ ಇಂದ್ರಿಯವನ್ನು ವಿವಿಧ ವಾಗಿ ಸ್ಪರ್ಶಿಸಿದ್ದರಿಂದ, ವೈದ್ಯನು ಅನವಶ್ಯಕವಾದ ದೇಹ ಪರೀಕ್ಷೆಗಳನ್ನೆಲ್ಲ ಮಾಡುತ್ತಿದ್ದಾಗ, ಚಿಕ್ಕವಳಿದ್ದಾಗ ಗಂಡಸರು ಕುಚಕುಳಿಯಾಡಿ (ಕಟ್ಟಾಡಿ) ಸಿದುದರಿಂದ, ಆಟದಲ್ಲಿ ವಿವಿಧವಾಗಿ ಮೈಯನ್ನು ಅಲುಗಾಡಿಸುವಾಗ, ಗೆಳತಿಯೂ ತಾನೂ ಪರಸ್ಪರ ಹೃತ್ಪೂರ್ವಕವಾದ ಪ್ರೇಮವನ್ನು ವ್ಯಕ್ತ ಪಡಿಸುತ್ತಿರುವಾಗ ಗೊತ್ತಿಲ್ಲದೆ ಒಮ್ಮಿಲೆ, ಮಲಬದ್ಧತೆಯನ್ನು ನಿವಾರಿಸುವ ಪ್ರಯತ್ನದಲ್ಲಿರುವಾಗ, ಪ್ರಥಮ ಋತುವನ್ನು ಮುಚ್ಚಿಡಲು ಯೋನಿಯಲ್ಲಿ ಬಟ್ಟೆಗಳನ್ನು ತುಂಬಿಕೊಂಡುದರಿಂದ ಇತ್ಯಾದಿ. ಅಲ್ಲದೆ ಶೈಶವದಲ್ಲಿ ಇಂದ್ರಿ ಯೋದ್ರೇಕಕ್ಕೆ ಹೇಳಿದ ಕರುಳಿನ ಜಂತು, ಬಿಗಿಯಾದ ಉಡಿಗೆ ತೊಡಿಗೆ, ಸಂಕುಚಿತವಾದ ಮುಂದೊಗಲು, ಇಂದ್ರಿಯದಲ್ಲಿ ತುರಿಕೆಯುಳ್ಳ ಚರ್ಮರೋಗ ಗಳು, ಮಲಬದ್ಧತೆ, ಮುಂತಾದವುಗಳು ತರುಣ ತರುಣಿಯರಲ್ಲಿಯೂ ಇಂದ್ರಿ ಯೋದ್ದೀಪನಕ್ಕೆ ಕಾರಣಗಳಾಗುತ್ತವೆ.

ಮೇಲಿನವು ತರುಣಿಯರ ಹಸ್ತಪ್ರಯೋಗದ ಪ್ರಥಮ ಕಾರಣ ಗಳೆಂದು ಹೇಳಿದ್ದರೂ ತರುಣರಿಗೂ ಅವುಗಳು ಅನ್ವಯಿಸುವವೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲದೆ ಹಿರಿಯ ಹುಡುಗ ಹುಡುಗಿಯರು ಚಿಕ್ಕ ಗೆಳೆಯ ಗೆಳತಿಯರಿಗೆ ಕಲಿಸುವುದೂ ಉಂಟು. ಹಾಗೆ ಉಪದೇಶ ಕೊಡುವವರು ಕೆಲವು ಕುಂಬು ತತ್ವಗಳ ವ್ಯಾಖ್ಯಾನ ಕೊಡುತ್ತಾರೆ. ಉದಾ: (೧) ಗಂಡಸ ರಾದವರೆಲ್ಲ ಮುಷ್ಟಿಮೈಥುನವನ್ನು ಮಾಡಿಕೊಳ್ಳಲೇಬೇಕು, ಅದರಿಂದ ಗಂಡಸುತನವು ಹೆಚ್ಚಾಗುತ್ತದೆ. (೨) ಮುಷ್ಟಿಮೈಥುನದಿಂದ ಸ್ತ್ರೀ ಪುರುಷರ ಲಿಂಗಯೋನಿಗಳು ಬಲಗೊಂಡು ಮುಂದೆ ಪ್ರಪಂಚ ಸಾಗಿಸಲಿಕ್ಕೆ ಸುಲಭ ವಾಗುವವು. (೩) ಸ್ವಪ್ನಸ್ಖಲನದಿಂದ ಕ್ಷಯರೋಗ ಬರುವದಾದ್ದರಿಂದ ಅದನ್ನು ನಿಲ್ಲಿಸಬೇಕಾದರೆ ಮುಷ್ಟಿಮೈಥುನವನ್ನು ಮಾಡಿಕೊಳ್ಳಬೇಕು. (ಈ ಮಾದರಿಯ ಉಪದೇಶವನ್ನು ತಿಳಿದವರೆನಿಸಿದ ಕೆಲವು ವೈದ್ಯರೂ,

ಡಾಕ್ಟರರೂ ಕೊಟ್ಟ ಉದಾಹರಣೆಗಳು ನಮಗೆ ಗೊತ್ತಿವೆ.) (೪) ಶರೀರದಲ್ಲಿ ಮಿತಿಮೀರಿ ವೀರ್ಯಸಂಚಯವಾಗುವುದರಿಂದ ತರುಣತರುಣಿಯರ ಮೊಗದಲ್ಲಿ ಮೊಡವೆಗಳಾಗಿ ಸೌಂದರ್ಯವನ್ನು ಕೆಡಿಸುವವು. ಹಸ್ತಪ್ರಯೋಗದಿಂದ ವೀರ್ಯವನ್ನು ಸ್ಖಲಿಸಿಕೊಳ್ಳುವುದೆ ಅದಕ್ಕೆ ಉತ್ಕೃಷ್ಟವಾದ ಉಪಾಯ. (೫) ಮೇಲಿಂದ ಮೇಲೆ ತಲೆನೋವು ಸ್ಮೃತಿಹೀನತೆಗಳಿಂದ ಬಳಲುತ್ತಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಹಸ್ತಪ್ರಯೋಗದಿಂದ ಭಾರ ಇಳಿದಂತಾಗಿ ಮಿದುಳು ಚುರುಕಾಗಿ ಅಭ್ಯಾಸದಲ್ಲಿ ಮನಸ್ಸು ತೊಡಗುವುದು. (ಈ ಹುಚ್ಚು ತತ್ವವನ್ನು ನಂಬಿ ಹಸ್ತಪ್ರಯೋಗವನ್ನು ಆರಂಭಿಸಿದವರ ಹತ್ತಾರು ಪತ್ರಗಳು ನಮ್ಮಲ್ಲಿವೆ.) (೬) ಗಂಡಸಿನಂತೆ ಬಿರುಸಾದ ಮೈಯುಳ್ಳ ಹೆಂಗಸರು ಹಸ್ತಪ್ರಯೋಗದಿಂದ ಕೋಮಲ ತರುಣಿಯರಾಗುವರೆಂಬ ಭ್ರಮೆಯಿಂದ ಅನೇಕ ಯುವತಿಯರು ಮೊದಲು ಅದನ್ನು ಪ್ರಾರಂಭಿಸುವರೆಂದು ಪಾಶ್ಚಾತ್ಯ ವಿಜ್ಞಾನಿಗಳೊಬ್ಬರು ಹೇಳುತ್ತಾರೆ.

ಮೇಲಿನ ತತ್ವಗಳು ತಿಳಿಗೇಡಿತನದ ಪರಿಣಾಮವೆಂದು ಸ್ಪಷ್ಟೀಕರಿಸುವ ಅಗತ್ಯವೇ ಇಲ್ಲ. 'ಬಳ್ಳಿಗುರುಡರು ಕೂಡಿ ಹಳ್ಳದಲ್ಲಿ ಬಿದ್ದರು' ಎಂಬಂತೆ ಕಾಮವಿಜ್ಞಾನದ ತಿಳುವಳಿಕೆಯಿಲ್ಲದ ಯುವಕ ಯುವತಿಯರು ಅಜ್ಞಾನಿ ಗುರುಗಳ ಶಿಷ್ಯರಾಗಿ ಆ ಚಟಗಳನ್ನು ಅಂಟಿಸಿಕೊಳ್ಳುತ್ತಾರೆ. ಮುಂದಿನ ಪ್ರಕರಣಗಳನ್ನು ಓದುವ ವಾಚಕರಿಗೆ ಮೇಲಿನ ಉಪದೇಶದಲ್ಲಿಯ ಮರುಳುತನವು ನಗೆಯನ್ನು ಹುಟ್ಟಿಸದಿರದು.

ಯೌವನಸುಧೆಯಿಂದ ತುಂಬಿದ ಅಂಗಾಂಗಗಳ ಸುಖಸಂವೇದನೆಗಳಿಂದ ಪುಳಕಿತರಾದ ತರುಣ ತರುಣಿಯರಿಗೆ ಪ್ರತಿಲಿಂಗಿಗಳ ಕಡೆಗೆ ಕಾಮದ ಒಲವು ಉಂಟಾಗುವುದು. ಕಾಮದ ಸುಖತರಂಗಗಳು ತನುಮನಗಳಲ್ಲಿ ಲೀಲೆಯಾಡುತ್ತಿರುವಾಗ ಹಿಂದೆ ವಿವರಿಸಿದ ಯಾವುದಾದರೊಂದು ಕಾರಣದಿಂದ ಅವರಿಗೆ ಜನನೇಂದ್ರಿಯಗಳ ಸಂಚಾಲನ ಘರ್ಷಣಗಳಲ್ಲಿರುವ ಹರುಷವು ಗಮನಕ್ಕೆ ಬರುವುದು. ಸುಖದಾಯಕವಾದ ಪ್ರತಿಯೊಂದು ಅನುಭವವನ್ನು ಪುನರಾವೃತ್ತಿಗೊಳಿಸುವ ಪ್ರವೃತ್ತಿಯು ನಮ್ಮ ದೇಹ ಮನಸ್ಸುಗಳಿಗಿದೆ. ಅದರಿಂದ ಮೊದಲು ಅಕಸ್ಮಾತ್ತಾಗಿ ನಡೆದ ಇಂದ್ರಿಯ ಸಂಚಾಲನವನ್ನು ಈಗ ಉದ್ದೇಶಪೂರ್ವಕವಾಗಿ ಮಾಡಲು ಯುವಕ ಯುವತಿಯರು ತೊಡಗುವರು.

ಹೀಗೆ ಪ್ರತಿಸಲದ ಉದ್ದೀಪನದ ಸುಖವು ಮತ್ತೊಂದು ಸಲ ಅದನ್ನು ಮಾಡಿ ಕೊಳ್ಳುವ ಪ್ರೇರಣೆಯನ್ನು ಹುಟ್ಟಿಸುವುದರಿಂದ ಕ್ರಮೇಣ ಅದೊಂದು ಚಟವಾಗಿ ಪರಿಣಮಿಸುವುದು.

ನೈಸರ್ಗಿಕವಾಗಿ ಬೆಳೆಯುತ್ತ ಬಂದ ಹೆಣ್ಣುಗಂಡುಗಳು ಸ್ವರತಿಯಿಂದ ಪ್ರತಿರತಿಯಲ್ಲಿ ಪ್ರವೇಶಿಸಬೇಕು. ಆದರೆ ಹಿರಿಯರ ಅಜ್ಞಾನ, ಸಾಮಾಜಿಕ ಪರಿಸ್ಥಿತಿ, ಧಾರ್ಮಿಕ ಮೂಢಕಲ್ಪನೆಗಳ ಮೂಲಕ ತರುಣ-ತರುಣಿಯರಲ್ಲಿ ಪ್ರತಿರತಿಯು ಪೂರ್ಣವಾಗಿ ವಿಕಸಿತವಾಗಲು ಅವಕಾಶ ಸಿಗುವುದಿಲ್ಲ. ಅಲ್ಲದೆ ಧರ್ಮ, ಸಮಾಜ, ಸ್ವಾಮಿಗಳ ಕಣ್ಣಿಗೆ ಕಾಣದಂತೆಯೆ ಕಾಮವೇದನೆಯನ್ನು ಕೊಂಚ ತಣಿಸಿಕೊಳ್ಳುವ ಉಪಾಯವು ತಿಳಿದ ಮೇಲೆ ಹರೆಯರು ತಮ್ಮ ಪ್ರತಿರತಿಯ ಪ್ರವೃತ್ತಿಗೆ ಬ್ರಹ್ಮಚರ್ಯೆಯ ಮುಸುಕನ್ನು ಹಾಕಿ ಸ್ವರತಿಯಲ್ಲಿ ಲೀನರಾಗದೆ ಗತ್ಯಂತರವಿಲ್ಲ. ಇದೀಗ ತಾರುಣ್ಯದ ಸ್ವರತಿಯ ಉಗಮವಾಗಿದೆ. 'ರತಿ'ಯೆಂದರೆ ಕಾಮಪ್ರವೃತ್ತಿ; ಕಾಮತೃಪ್ತಿಗಾಗಿ ತರುಣರು ತರುಣಿಯ ರನ್ನು ಹೆಂಗಸರು ಗಂಡಸರನ್ನು ಅವಲಂಬಿಸಬೇಕಾಗುತ್ತದೆ. ಹಾಗೆ ಮಾಡದೆ **ತರುಣ ತರುಣಿಯರು ತಮ್ಮ ತಮ್ಮ ತನುಮನಗಳಲ್ಲಿಯೆ ಕಾಮೋದ್ದೀಪನವನ್ನು ಮಾಡಿಕೊಂಡು ತಮ್ಮಲ್ಲಿಯೆ ತೃಪ್ತಿಯನ್ನು ಪಡೆಯಲೆಳಸುವ ಪ್ರವೃತ್ತಿಗೆ 'ಸ್ವರತಿ'ಯೆಂದು ಹೆಸರು.** ಆ ಪ್ರವೃತ್ತಿಯು ಬರಿ ತಮ್ಮ ಲಿಂಗ-ಯೋನಿಗಳನ್ನು ಕೈಯಿಂದ ಇಲ್ಲವೆ ಮುಷ್ಟಿಯಿಂದ ಚಾಲನೆಗೊಳಿಸುವ ಲಕ್ಷಣವೊಂದರಿಂದಲೆ ವ್ಯಕ್ತವಾಗುವುದಿಲ್ಲ. ಅರ್ಥಾತ್ ಸ್ವರತಿಯ ಲಕ್ಷಣವು ಹಸ್ತಪ್ರಯೋಗವೊಂದೇ ಅಲ್ಲ. ಹಸ್ತ, ಲಿಂಗ, ಯೋನಿಗಳಿಗೆ ಕೊಂಚವೂ ಸಂಬಂಧಿಸದ ಉದ್ದೀಪನದ ರೀತಿಗಳೂ ಬೇಕಾದಷ್ಟಿವೆ. ಅವೆಲ್ಲವೂ ಸ್ವರತಿಯಲ್ಲಿಯೆ ಸೇರುವವು. ಮುಂದಿನ ಪ್ರಕರಣದಲ್ಲಿ ಆ ವಿಷಯವನ್ನು ಚರ್ಚಿಸುವಾ.



# ಐದನೆಯ ಪ್ರಕರಣ

*

## ವಿಭೇದ ಮತ್ತು ವಿಧಾನ

ಮುಷ್ಟಿಮೈಥುನ, ಹಸ್ತಪ್ರಯೋಗ ಅಥವಾ ಅಂತಹ ವೈಯಕ್ತಿಕ ಉದ್ರೇಕದ ಯಾವುದೊಂದು ಪ್ರವೃತ್ತಿಯ ಮೂಲದಲ್ಲಿ ಸ್ವ—ರತಿಯಿರುತ್ತದೆಂಬುದನ್ನು ಹಿಂದಿನ ಎರಡು ಪ್ರಕರಣಗಳಲ್ಲಿ ವಿವರಿಸಿದೆವು. ನೈಸರ್ಗಿಕವಾದ ಬೆಳಿಗೆಯ ಮಾರ್ಗದಲ್ಲಿಯೆ ಸ್ವ—ರತಿಯೂ ಒಂದು ಕ್ಷಣಿಕವಾದ ನಿಲ್ದಾಣವಿದೆ. ಮಗುವು ಸ್ವರತಿಯ ಅವಧಿಯನ್ನು ದಾಟುತ್ತಿರುವಾಗ ಅದರಲ್ಲಿ ಸ್ವೋದ್ರೇಕದ ಎಷ್ಟೋ ಲಕ್ಷಣಗಳು ಕಾಣಬಹುದು. ಅವುಗಳಲ್ಲಿ ಮುಷ್ಟಿಪ್ರಯೋಗವೂ ಒಂದಾಗಿದೆ. ಅಂತಹ ಲಕ್ಷಣಗಳಲ್ಲಿ 'ಧಾತುಶುಕ್ರ'ದ ಕಾಮವಿದೆಯೆಂಬುದು ನಿಜವಾದರೂ ಅದರಲ್ಲಿ ಸಂಭೋಗಪ್ರವೃತ್ತಿಯಾಗಲಿ ಪ್ರತಿಲಿಂಗಿಯ ವಿಷಯದಲ್ಲಿ ಕಾಮುಕತೆಯಾಗಲಿ ಇರುವದಿಲ್ಲವೆಂಬುದೂ ನಮಗೆ ತಿಳಿಯಿತು. ಮುಂದೆ ಮಗುವು ಆಟನೋಟಗಳ ಕಡೆಗೆ ಲಕ್ಷ್ಯಕೊಡಲಾರಂಭಿಸಿತೆಂದರೆ ಕ್ರಮೇಣ ಸ್ವ—ರತಿಯು ಮಾಯವಾಗಿ ಸಮ—ರತಿ (ಹುಡುಗರು ಹುಡುಗರನ್ನು, ಹುಡುಗಿಯರು ಹುಡುಗಿಯರನ್ನು ಪ್ರೀತಿಸುವ) ಪ್ರವೃತ್ತಿಯು ಉದಯವಾಗಿ ಶೈಶವದ ಇಂದ್ರಿಯ ಚಾಲನ ಮುಂತಾದ ಲಕ್ಷಣಗಳು ಇಲ್ಲದಂತಾಗುವವು.

ನಂತರ ಮಕ್ಕಳು ಕೌಮಾರಾವಸ್ಥೆಯಲ್ಲಿ ಕಾಲಿಟ್ಟ ಮೊದಲುಗೊಂಡು ಅವರ ದೇಹ-ಮನಸ್ಸುಗಳಲ್ಲಿ ಸಾವಕಾಶವಾದ ಒಂದು ಮಾರ್ಪಾಡುಂಟಾಗುವುದು. ಕಾಮಗ್ರಂಥಿಗಳಲ್ಲಿ "ಯುವಾಶುಕ್ರ"ದ ಸೆಲೆಯೊಡೆದು ಕಾಮಾಂಗಗಳಲ್ಲಿ ಚೈತನ್ಯವನ್ನೂದಿದುದೆ ಆ ಮಾರ್ಪಾಟಿಗೆ ಕಾರಣವಾಗಿದೆ. ಆ ಯುವಾಶುಕ್ರದ ಸೆಲೆಯೊಡನೆ ಈವರೆಗೆ ಗುಪ್ತಗಾಮಿನಿಯಾದ ಕಾಮನದಿಯು

ಪುನಃ ಮೇಲಕ್ಕೇರಿ ಹರಿಯಲಾರಂಭಿಸುತ್ತದೆ. ತತ್ಪರಿಣಾಮವಾಗಿ ಹುಡುಗ ಹುಡುಗಿಯರು ಚಿತ್ತಕ್ಷೇತ್ರದಿಂದ ಅದೃಶ್ಯವಾದ ಕಾಮಾಂಗಗಳ ಕಡೆಯ ಲಕ್ಷ್ಯವು ಪುನಃ ಮೂಡಿಕೊಳ್ಳುತ್ತದೆ. ಅದರೊಡನೆಯೆ ಬಾಲ್ಯದಲ್ಲಿ ಬಿಟ್ಟು ಬಂದ ಕೆಲವು ಸ್ವೋದ್ರೇಕದ ಒಲವುಗಳೂ ಒಡಮೂಡುತ್ತವೆ. ಈವರೆಗೆ ಅಗೋಚರವಾದ ವೃತ್ತಿಯು ಒಮ್ಮೆಲೆ ಪುನಃ ತೋರಿಕೊಳ್ಳುವುದಕ್ಕೆ ಯಾವು ದಾದರೊಂದು ಸುಖಾನುಭವದ ಸಂಗತಿಯು ಕಾರಣವಾಗುವುದೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಹೇಳಿದ್ದೇವೆ. ಶುಕ್ರಾಪ್ಯಾತವನ್ನು ನಿಲಿದು ಉನ್ಮತ್ತ ವಾದ ತನುಮನಗಳು ಯಾವುದಾದರೊಂದು ಕ್ಷುಲ್ಲಕ ಕಾರಣದಿಂದ ಉದ್ದೀಪಿತ ವಾಗಿ ತರುಣ ತರುಣಿಯರು ಕಾಮಾಂಗಗಳ ಕಡೆಗೆ ಲಕ್ಷ್ಯಕೊಡುವಂತೆ ಪ್ರೇರಿಸುತ್ತವೆ. ಸಾರಾಂಶ—ಮಗುವು ಪೂರ್ಣ ಮನುಷ್ಯನಾಗಬೇಕಾದರೆ ಅದು ಶೈಶವ ಮತ್ತು ಕೌಮಾರ ಎಂಬ ಎರಡು ಸಂಕ್ರಾಂತಿಗಳ ಅವಧಿಯನ್ನು ದಾಟಬೇಕು ಆ ಎರಡು ಅವಧಿಗಳಲ್ಲೂ ಸ್ವರತಿಯ ಒಲವುಂಟಾಗುತ್ತದೆ ನೈಸರ್ಗಿಕವಾದ ಬೆಳೆಗೆಯಲ್ಲಿ ಶೈಶವದ ಸ್ವರತಿಯು ಸಮರತಿಯಲ್ಲಿ ಮಾರ್ಪ ಡಬೇಕು; ಕೌಮಾರದ ಸ್ವರತಿಯು ಪ್ರತಿರತಿಯಲ್ಲಿ ಮಾರ್ಪಡಬೇಕು ಹಾಗಾದರೆ ಶೈಶವದ ಸ್ವರತಿಯು ಬಾಲ್ಯ, ಕೌಮಾರಗಳವರೆಗೆ ಬೆಳೆದು ಬರುವುದೂ ಇಲ್ಲವೆ ಕೌಮಾರದ ಸ್ವರತಿಯು ತಾರುಣ್ಯ, ಪ್ರೌಢಾವಸ್ಥೆ ಗಳಲ್ಲಿಯೂ ನೆಲೆಯೂರುವುದೂ ಬೆಳೆಗೆ ತಡೆದುದರ ಲಕ್ಷಣವಾಗಿದೆ ಹಾಗೆ ಬೆಳೆಗೆ ತಡೆಯದೆ, ಶಿಶುಗಳೂ ಕುಮಾರ ಕುಮಾರಿಯರೂ ಸುಖರೂಪ ವಾಗಿ ತಮ್ಮ ಸ್ವರತಿಯ ಸಂಧಿಯನ್ನು ದಾಟಲು ಸಹಾಯ ಮಾಡಬೇಕಾದರೆ ಶೈಶವದ ಮತ್ತು ಕೌಮಾರಾವಸ್ಥೆಯ ಸ್ವರತಿಗಳಲ್ಲಿಯ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು

ಸ್ವರತಿಯ ಎಲ್ಲ ಪ್ರವೃತ್ತಿಗಳನ್ನು ಅಜ್ಞಾತ ಮತ್ತು ಜ್ಞಾತ ಎಂದು ಎರಡು ವರ್ಗಗಳಲ್ಲಿ ಸೇರಿಸಬಹುದು. ಅಜ್ಞಾತದ ವಿಷಯವನ್ನು ಮೊದಲು ತೆಗೆದುಕೊಳ್ಳುವಾ. ಅಜ್ಞಾತವೆಂದರೆ ತಿಳಿಯದೆಯೆ ಅನುದ್ದಿಷ್ಟವಾದ ಸ್ವೋದ್ರೇಕಕ್ಕೆ ಪ್ರವೃತ್ತವಾಗುವದು. ಕಾಮಾಂಗಗಳ ಚಲನೆಯು ಸುಖ ಕರವಾಗಿದೆ, ಎಂದು ಮೊದಲೆ ಚಿಂತಿಸದೆ ಬಯಸದೆ ಯಾವುದೋ ಘಟನೆಯ ಮೂಲಕ ವ್ಯಕ್ತಿಯ ಲಕ್ಷ್ಯವು ಉದ್ರಿಕ್ತ ಇಂದ್ರಿಯಗಳ ಕಡೆಗೆ ಸೆಳೆಯ

ಲ್ಪಡುವುದಕ್ಕೆ ಅಜ್ಞಾತ ಪ್ರವೃತ್ತಿಯೆಂದು ಹೇಳಬಹುದು ಉದಾಹರಣಾರ್ಥ, ಒಂದು ಮಗುವು ಮಲವಿಸರ್ಜನಕ್ಕೆ ಕುಳಿತಿದೆ ಆಗ ಅದಕ್ಕೆ ನೈಸರ್ಗಿಕ ವಾಗಿ ಲಿಂಗೋದ್ರೇಕವಾಗುತ್ತದೆ ಆ ಉದ್ರಿಕ್ತವಾದ ಇಂದ್ರಿಯದಲ್ಲಿ ಮಗು ವಿಗೊಂದು ಸುಖಾನುಭವವಾಗುತ್ತದೆ ಪರಿಣಾಮವಾಗಿ ಅದು ಇಂದ್ರಿಯ ದಲ್ಲಿಯ ಚಲನೆಯ ಕಡೆಗೆ ಲಕ್ಷ್ಯಕೊಡುತ್ತದೆ. ಮತ್ತು ಕೃತ್ರಿಮವಾಗಿ ಆ ಸಹಜ ಇಂದ್ರಿಯ ಚಲನೆಯನ್ನು ಅನುಕರಿಸುತ್ತದೆ. ಅವರ ಹಸ್ತ ಸ್ಪರ್ಶದಿಂದ ಇಂದ್ರಿಯವು ಪುನಃ ಪುನಃ ಉದ್ರಿಕ್ತವಾಗುತ್ತದೆ ಅದರಲ್ಲಿ ಸುಖವಿರುವುದರಿಂದ ಮಲವಿಸರ್ಜನವು ಒಂದು ಕಡೆಗುಳಿದು ಇಂದ್ರಿಯ ದೊಡನೆ ಆಟವಾಡುವುದರಲ್ಲಿಯೆ ಮಗುವು ವೇಳೆ ಕಳೆಯುವುದು ಚಿಕ್ಕ ಮಕ್ಕಳು ಮಲವಿಸರ್ಜನಕ್ಕೆ ಕೂತರೆ ಬೇಗ ಏಳುವುದಿಲ್ಲ ಒಂದೊಂದು ಸಲ ಒತ್ತಾಯದಿಂದ ಅವನ್ನು ಎಬ್ಬಿಸಬೇಕಾಗುತ್ತದೆಂಬುದು ಬಹುಶಃ ಎಲ್ಲ ತಂದೆ ತಾಯಂದಿರಿಗೆ ಗೊತ್ತಿದೆ ಆದರೆ ಆ ವಿಲಂಬಕ್ಕೆ ಮೇಲಿನ ಸ್ವರತಿಯೆ ಕಾರಣವೆಂದು ಮಾತ್ರ ಅವರಿಗೆ ತಿಳಿಯದು ಮಲವಿಸರ್ಜನಕ್ಕೂ ಇಂದ್ರಿ ಯೋದ್ರೇಕಕ್ಕೂ ಸಂಬಂಧವಿದ್ದುದನ್ನು ಕಂಡು ಮಕ್ಕಳು ಸರಿಯಾಗಿ ಮಲ ವನ್ನು ವಿಸರ್ಜಿಸದೆ ತಡೆತಡೆದು ವಿಸರ್ಜಿಸಿ ಇಂದ್ರಿಯೋದ್ರೇಕದ ಅವಧಿ ಯನ್ನು ಹೆಚ್ಚಿಸಿಕೊಳ್ಳುವವೆಂದು ಡಾ. ವಿನ್‌ಫೀಲ್ಡನು ಹೇಳುತ್ತಾನೆ ಒಂದು ಕಾರಣದಿಂದ ಉದ್ರೇಕವು ಮೊದಲಾಗುವುದು ನಂತರ ಉದ್ರೇಕವನ್ನು ಅನುಭವಿಸುವ ಬಯಕೆಯುಂಟಾಗುವುದು. ಆದ್ದರಿಂದ ಅದು ಅಜ್ಞಾತ ಸ್ವೋದ್ರೇಕದ ಪ್ರವೃತ್ತಿಯೆನಿಸುವುದು.

ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳುವಾ. ಡಾ ಲೀಫ ಮನ್ನನೆದುರಿನಲ್ಲಿ ಒಬ್ಬ ವಿದ್ಯಾರ್ಥಿಯು ತನ್ನ ಶೈಶವದ ಅನುಭವವನ್ನು ಹೀಗೆ ಹೇಳಿದ್ದಾನೆ :— (Encyclopaedia of sexual knowlegeದಿಂದ) ನನಗಾಗ ನಾಲ್ಕು ವರ್ಷ, ನಮ್ಮಣ್ಣನಿಗೆ ಆರು ವರ್ಷ. ಅವನು ನೆರೆಮನೆಯ ಆರು ವರ್ಷದ ಒಂದು ಹುಡುಗಿಯ ಚಡ್ಡಿಯ ಗುಂಡಿಗಳನ್ನು ಬಿಚ್ಚಿ ಬೆರಳು ಗಳಿಂದ ಅವಳ ಇಂದ್ರಿಯದೊಡನೆ ಆಡಹತ್ತಿದನು. ಆ ಹುಡುಗಿಯು ಆನಂದ ದಿಂದಲೋ ಏನೋ ಸುಮ್ಮನೆ ಶಾಂತವಾಗಿದ್ದಳು............ನಾನು ಕೂಡ ಒಂದೆರಡು ಸಲ ಅಂಥ ಆಟವನ್ನು ಆಡಿದೆ. ಆ ಆಟಕ್ಕೆ ' ಸಣ್ಣ ತಾಯಿ-ತಂದೆ

ಆಟ' ಎಂದು ನಾವು ಕರೆಯುತ್ತಿದ್ದೆವು. ಆ ಆಟದಲ್ಲಿ ನಮಗೆ ಬೇರೆ ಯಾವ ಉದ್ದೇಶವೂ ಇರಲಿಲ್ಲ. ತಾತ್ಕಾಲಿಕವಾಗಿ ಆಗುತ್ತಿದ್ದ ಕ್ಷಣಿಕ ಸುಖ ಸಂವೇದನೆಯೆ ನಮಗೆ ಅದನ್ನು ಆಡಹಚ್ಚುತ್ತಿತ್ತೆನ್ನಬಹುದು. ನಮ್ಮತ್ತ ಕಡೆಯ ಚಿಕ್ಕ ಮಕ್ಕಳಲ್ಲಿ ಅಂಥ ಆಟಗಳು ಈಗಲೂ ಪ್ರಚುರವಾಗಿವೆ ಈಗ ಕೆಲವು ದಿನಗಳ ಹಿಂದೆ ಒಂದು ಮಧ್ಯಾಹ್ನ ಏಳು ವರ್ಷದ ಹುಡುಗನೂ ಒಂದು ಐದು ವರ್ಷದ ಹುಡುಗಿಯೂ ಹಾಗೆ ಆಡುತ್ತಿದ್ದರು ಅವರನ್ನು ಕರೆದು 'ಇದೇನು, ಇದೇನು ನಡೆಸಿರುವಿರಿ' ಎಂದು ಕೇಳಲು ಅವರು ನಾಚಿಕೆ ಅಂಜಿಕೆಗಳಿಲ್ಲದೆ 'ಅದೊಂದು ತಮಾಷೆ' ಎಂದರು. 'ನಿಮ್ಮಪ್ಪನು ಕಂಡರೆ ನಿಮ್ಮನ್ನು ಶಿಕ್ಷಿಸುವನು' ಎಂದು ನಾನೆಂದೆ ಅದಕ್ಕೆ ಅವನು 'ಅಪ್ಪನು ಏನೂ ಬೈಯುವದಿಲ್ಲ, ಏಕೆಂದರೆ ಅಮ್ಮನಿಗೆ ಅವನೂ ಹಾಗೆ ಮಾಡುವನು' ಎಂದು ಉತ್ತರವಿತ್ತನು

ಮೇಲಿನ ಉದಾಹರಣೆಯಿಂದ ಮಕ್ಕಳಲ್ಲಿ ತೋರುವ ಕಾಮಾಂಗಗಳ ಆಟದಲ್ಲಿ ಸಂಭೋಗ ಪ್ರವೃತ್ತಿಯಿರುವದಿಲ್ಲವೆಂದು ಸ್ಪಷ್ಟವಾಗುವುದು. ಮಿಕ್ಕ ಆಟಗಳಂತೆ ಜನನೇಂದ್ರಿಯಗಳೊಡನೆಯೂ ಅವರು ಆಟವನ್ನಾರಂಭಿಸುವರು. ಆಟದಲ್ಲಿ ಇಂದ್ರಿಯ ಸುಖವು ಗೋಚರಿಸಿದ ನಂತರವೆ ಅವರು ಅದನ್ನು ಕೊಂಚ ಹೆಚ್ಚು ಹೊತ್ತು ಆಡಲು ಪ್ರವೃತ್ತರಾಗುವರು. ಆ ಇಂದ್ರಿಯ ಸುಖವು ಕೂಡ ಕೇವಲ ದೈಹಿಕವಾದುದು. ಏಕೆಂದರೆ ಆ ವಯಸ್ಸಿನಲ್ಲಿ ಉದ್ರೇಕಕ್ಕೆ ಕಾರಣವಾದ ಬೆನ್ನುಹುರಿಯ ನರಗಳಿಗೂ ಕಾಮವಿಕಾರಕ್ಕೆ ಕಾರಣವಾದ ಮಿದುಳಿನ ಕೇಂದ್ರಗಳಿಗೂ ಇನ್ನೂ ಸಂಬಂಧ ಬೆಳೆದಿರುವದಿಲ್ಲ ಆದ್ದರಿಂದ ಇಂದ್ರಿಯೋದ್ರೇಕದ ಸುಖವು ಸ್ಥಾನಿಕ ನರಗಳಲ್ಲಿ ಮಾತ್ರ ಹರಿದಾಡುವುದೆ ಹೊರತು ಮಿದುಳಿನವರೆಗೋಡಿ ಸ್ಮೃತಿಕೇಂದ್ರದಲ್ಲಿ ಮನೆಮಾಡದು. ಅಲ್ಲದೆ ಶೈಶವದ ಉದ್ರೇಕದೊಡನೆ ಅಂಡಗಳಲ್ಲಿ ವೀರ್ಯೋತ್ಪತ್ತಿಯೂ ಆಗುವದಿಲ್ಲ; ಆದ್ದರಿಂದ ವೀರ್ಯಸ್ಖಲನದ ಸುಖವೂ ಇಲ್ಲ. ಸುಮಾರು ೧೩–೧೪ ವರ್ಷಗಳ ವರೆಗೆ ಮಕ್ಕಳಿಗೆ ಮುಷ್ಟಿಮೈಥುನದಲ್ಲಿ ವೀರ್ಯಸ್ಖಲನವಾಗುವದಿಲ್ಲ. ಹುಡುಗಿಯರ ಉದ್ರೇಕ ಕಾಲದಲ್ಲಿಯೂ ಕಾಮಗ್ರಂಥಿಗಳಲ್ಲಿ ಅವರ ಶುಕ್ರವು (ಅಂತಃಸ್ರಾವವು) ಸ್ರವಿಸದುದರಿಂದ ಸ್ವೋದ್ರೇಕದಿಂದ ಮಾನಸಿಕ ಆನಂದ. ವಿಶೇಷವಾಗಿರುವುದೆ ಇಲ್ಲ. ಸಾರಾಂಶ, ಶೈಶವ ಬಾಲ್ಯಗಳಲ್ಲಿಯ ಸ್ವರತಿಯ

ಕ್ರಿಯೆಗಳೆಲ್ಲ ಸ್ಥಾನಿಕ ನರಗಳಲ್ಲಿ ಮಾತ್ರ ಹರ್ಷವನ್ನು ಹುಟ್ಟಿಸುತ್ತವೆ. ಶುಕ್ರಸ್ರಾವವಿದ್ದರೆ ತನುಮನಗಳೆರಡೂ ಆನಂದಭರಿತವಾಗುತ್ತಿದ್ದವು ಆದ ರಿಂದ ಒಂದು ಸಲದ ಸ್ವರತಿ ಕ್ರಿಯೆಯಿಂದ ಉಂಟಾದ ಆನಂದದ ಸಂಸ್ಕಾರವು, ಸ್ಥಿರವಾಗಿ ಮಿದುಳಿನಲ್ಲಿ ಬೇರೂರುವದಿಲ್ಲ ಮತ್ತು ಸ್ಮೃತಿ ಕೇಂದ್ರಕ್ಕಿಳಿಯದ ಯಾವ ಸುಖ ಸಂಸ್ಕಾರವೂ ಅದೇ ಕ್ರಿಯೆಯನ್ನು ಪುನಃ ಕೈಕೊಳ್ಳುವ ಬಯಕೆಯನ್ನು ಹುಟ್ಟಿಸಲಾರದು. ಆಂತರಿಕ ಇಚ್ಛೆಯು ಇಲ್ಲದಿದ್ದರೆ ಯಾವ ಕ್ರಿಯೆಯೂ ಬೇರೂರಿದ ಚಟವಾಗಲಾರದು.

ಹುಚ್ಚರ ಆಸ್ಪತ್ರೆಗಳಲ್ಲಿ ಕೆಲ ಕೆಲವು ಹುಚ್ಚರು ದಿನಕ್ಕೆ ೫೦–೬೦ ಸಲ ಕೂಡ ಮುಷ್ಟಿಮೈಥುನ ಮಾಡಿಕೊಳ್ಳುವರು ಆನಂದವಾದ ಕೂಡಲೆ ಕೆಲವರು ಮುಷ್ಟಿಮೈಥುನ ಮಾಡಿಕೊಳ್ಳುವರು. ಆದರೆ ಮನದಲ್ಲಿ ಕಾಮೋದ್ರೇಕವಾದಾಗ ಅದನ್ನು ತೃಪ್ತಿಪಡಿಸಿಕೊಳ್ಳಲೆಂದು ಅವರದನ್ನು ಮಾಡಿಕೊಳ್ಳುವದಿಲ್ಲ. ವೀರ್ಯಸ್ಖಲನವಾಗುವವರೆಗೂ ಅವರು ಅದನ್ನು ಮುಂದುವರಿಸುವದಿಲ್ಲ. ಬೇರೆ ಕಡೆಗೆ ಲಕ್ಷ್ಯ ಹರಿಯಿತೆಂದರೆ ನಡುವೆ ಅದನ್ನು ನಿಲ್ಲಿಸಲೂ ಬಹುದು ಆದರೆ ಕಾಮಭಾವನೆ ಅಥವಾ ಹಿಂದಿನ ಕಾಮಸುಖದ ನೆನಪು ಜಾಗೃತವಾಗಿರುವವರ ಸ್ವರತಿ ಕ್ರಿಯೆಯು ಅರ್ಧಕ್ಕೆ ನಿಲ್ಲಲಾರದು ಹುಚ್ಚರ ಮನಸ್ಸು ಚಿಕ್ಕಮಕ್ಕಳ ಮನಸ್ಸಿನಷ್ಟೆ ಬೆಳೆದಿರುವುದರಿಂದ ಅವರ ಪ್ರವೃತ್ತಿಗಳು ಮಕ್ಕಳ ಪ್ರವೃತ್ತಿಗಳನ್ನು ಹೋಲುತ್ತವೆ ಮಕ್ಕಳು ಇಂದ್ರಿಯದ ನರಗಳ ಸ್ಥಾನಿಕ ಸುಖಕ್ಕಾಗಿ ಸಂಚಾಲನ ಘರ್ಷಣಗಳನ್ನು ಮಾಡುವದರಿಂದಲೂ ಅವರ ಸ್ಮೃತಿಯಲ್ಲಿ ಸ್ತ್ರೋದ್ರೇಕದ ಸಂಸ್ಕಾರಗಳು ಹೆಚ್ಚು ಆಳವಾಗಿ ನೆಲೆಗೊಳ್ಳುವದಿಲ್ಲ. ಆದ್ದರಿಂದ ತುಸು ಬೆಳೆದು ಓರಗೆಯವರೊಡನೆ ಆಟನೋಟಗಳ ಕಡೆಗೆ ಒಲವುಂಟಾದ ಕೂಡಲೆ ಸ್ವರತಿಯು ತನ್ನಷ್ಟಕ್ಕೆ ನಿಂತುಬಿಡುವುದು.

ಆದರೆ ಕೌಮಾರಾವಸ್ಥೆಯಲ್ಲಿ ಕಾಮಗ್ರಂಥಿಗಳಿಗೂ ಮಿದುಳಿನ ಕಾಮ ಕೇಂದ್ರಗಳಿಗೂ ಸಂಬಂಧವುಂಟಾಗುತ್ತದೆ. ಅದರ ಪರಿಣಾಮವಾಗಿ ಒಂದೆಡೆಯಲ್ಲಿ ಎದ್ದ ಉದ್ದೀಪನದ ಅಲೆಯು ಮತ್ತೊಂದೆಡೆಯವರೆಗೂ ಹೋಗಿ ಅಪ್ಪಳಿಸುವುದು. ಕಾಮಾಂಗಗಳು ಉದ್ರಿಕ್ತವಾದರೆ ಮಿದುಳಿನಲ್ಲಿ ಕಾಮಚಿತ್ರಗಳು ಮೂಡುವವು. ಮಿದುಳು ಕಾಮಚಿಂತನವನ್ನು ಮಾಡಿದರೆ ಇಂದ್ರಿಯಗಳು

ಕಾಮೋದ್ರಿಕ್ತವಾಗುವವು ಅಲ್ಲದೆ ಕೌಮಾರಾವಸ್ಥೆಯಲ್ಲಿ ಓಜೋಗ್ರಂಥಿಗಳ ರಾಸಾಯನಿಕ ಅನುಕ್ರಿಯೆಯಿಂದ ಗಂಡು ಹೆಂಣುಗಳಲ್ಲಿ ಪರಸ್ಪರ ಆಕರ್ಷಣವೂ ಉತ್ಪನ್ನವಾಗುತ್ತದೆ ಕಾಮಾಂಗಗಳ ಉದ್ರೇಕವು ಮನಸ್ಸನ್ನು ಕೆಣಕುವದರಿಂದ ಕೌಮಾರಾವಸ್ಥೆಯಲ್ಲಿಯ ಸ್ವರತಿಯ ಕ್ರಿಯೆಗಳು ಸ್ಮೃತಿಕೇಂದ್ರಗಳಲ್ಲಿ ಸ್ಥಿರವಾಗಿ ಉಳಿಯುವವು ಅದರಿಂದ ಬಾಹ್ಯ ಉತ್ತೇಜಕವೇನೂ ಇಲ್ಲದಿದ್ದರೂ ಹಿಂದಿನ ಸಂಸ್ಕಾರವೆ ನೆನಪಿಗೆ ಬಂದು ಮನಃಪಟಲದ ಮೇಲೆ ಕಾಮಚಿತ್ರವನ್ನು ಮೂಡಿಸುವುದು ಆ ಮನಶ್ಚಿತ್ರದಿಂದ ಉಂಟಾದ ಉದ್ರೇಕವು ವಿದ್ಯುದ್ವೇಗದಿಂದ ಕಾಮಾಂಗಗಳ ಕಡೆಗೆ ಓಡಿ ಅವನ್ನೂ ಉದ್ದೀಪಿಸುವುದು ಆಗ ಹಿಂದೆ ಮಾಡಿದಂತಹ ಕಾಮುಕ ಚಟುವಟಿಕೆಗಳನ್ನೆ ಮಾಡಿಕೊಳ್ಳುವ ಪ್ರೇರಣೆಯುಂಟಾಗುವದು. ಕೌಮಾರದ ಸ್ವಿಯ ಉದ್ರೇಕಕ್ಕೆ ಪ್ರೇರಣೆ, ಪ್ರೋತ್ಸಾಹ ಉತ್ತೇಜನಗಳು ಮನಶ್ಚಿತ್ರಗಳಿಂದ ಸಿಗುವುದಾದ್ದರಿಂದ ಅವಕ್ಕೆ 'ಜ್ಞಾತ ಸ್ವರತಿ' ಎನ್ನುವರು

ಚಿಕ್ಕಂದಿನ ಸ್ವರತಿಯಲ್ಲಿ ಬಾಹ್ಯ ಉತ್ತೇಜನವೆ ವಿಶೇಷವಾಗಿ ಕಾರಣವಾಗಿರುತ್ತದೆ. ಅಲ್ಲದೆ ಅದರಲ್ಲಿ ದೈಹಿಕ ಸಂವೇದನೆಯೆ ಮುಖ್ಯವಾಗಿರುವುದರಿಂದ ಒಂದು ಸಲದ ಸ್ವರತಿಯ ಸುಖವು ಸ್ಮೃತಿಯ ಮೂಲಕ ಮತ್ತೊಂದು ಸಲದ ಸ್ವರತಿಗೆ ಪ್ರೇರಿಸುವುದಿಲ್ಲ ಆಗಿನ ಪ್ರತಿಸಲದ ಸ್ವರತಿಯ ಕ್ರಿಯೆಯೂ ಯಾವುದೊಂದು ದೈಹಿಕ ಉತ್ತೇಜನದಿಂದಲೆ ಪ್ರಾರಂಭವಾಗುತ್ತದೆ ಆದರೆ ಹರೆಯದ ಸ್ವರತಿಯಲ್ಲಿ ಮನಮೋಹಕವಾದ ಪ್ರತಿಲಿಂಗಿಯ ಕಾಮವಿರುವುದರಿಂದಲೂ, ಸುಖವಾಗಿ ವೀರ್ಯ ಸ್ಖಲಿಸುವುದರಿಂದಲೂ ಪ್ರತಿಸಲದ ಸ್ವರತಿ ಕ್ರಿಯೆಯು ಸ್ಮೃತಿಕ್ಷೇತ್ರದಲ್ಲಿಳಿದು ಮುಂದಿನ ಕ್ರಿಯೆಗೆ ಪ್ರೇರಕವೂ ಪೋಷಕವೂ ಆಗುವುದು ಆದ್ದರಿಂದ **ಶೈಶವದ 'ಅಜ್ಞಾತಸ್ವರತಿ'ಯಲ್ಲಿ ಹಸ್ತಪ್ರಯೋಗವು ತೀವ್ರವಾದ ಪುನರಾವೃತ್ತಿಗೆ ಮಕ್ಕಳನ್ನು ಎಳೆಯುವುದಿಲ್ಲ; ಆದರೆ ಕೌಮಾರದ 'ಜ್ಞಾತಸ್ವರತಿ'ಯಲ್ಲಿ ಹಸ್ತಪ್ರಯೋಗದ ಮಾನಸಿಕ ಸುಖವು ತೀವ್ರವಾದ ಪುನರಾವೃತ್ತಿಗೆ ಹುಡುಗ ಹುಡುಗಿಯರನ್ನು ನೂಕುವುದು.** ಪುನರಾವೃತ್ತಿ ಕಡಿಮೆಯಾದುದರಿಂದ ಬಾಲ್ಯದ ಸ್ವರತಿಯು ಚಟವಾಗಿ ಅಂಟಿಕೊಳ್ಳುವ ಸಂಭವ ಕಡಿಮೆ. ಪುನರಾವೃತ್ತಿಯ ಮೋಹವು ಸಂಯಮಿಸಲಾರದಷ್ಟು ತೀವ್ರವಾಗಿರುವುದರಿಂದಲೆ ಹರೆಯದ

ಸ್ವರತಿಯು ಚಟವಾಗಿ ನೆಲೆಯೂರುವ ಭೀತಿ ಹೆಚ್ಚಾಗಿರುತ್ತದೆ. ಶೈಶವದ ಸ್ವರತಿಯಲ್ಲಿ ಮಾನಸಿಕ ಸಂಬಂಧವು ವಿಶೇಷವಾಗಿಲ್ಲವಾದುದರಿಂದ ಆಗಿನ ಸ್ವರತಿಯ ಚಟುವಟಿಕೆಗಳಲ್ಲಿ ಹೆಚ್ಚಿನ ವೈವಿಧ್ಯವಿರುವುದಿಲ್ಲ. ಯೌವನದ ಸ್ವರತಿಗೆ ಪ್ರಾಮುಖ್ಯವಾಗಿ ಮನಸ್ಸೆ ಕ್ರೀಡಾರಂಗವಾದುದರಿಂದ ಮನುಷ್ಯನು ಅನೇಕ ವಿಧದಲ್ಲಿ ಸ್ವರತಿಯನ್ನು ತೃಪ್ತಿಪಡಿಸಿಕೊಳ್ಳುವ ಯುಕ್ತಿಗಳನ್ನು ಹುಡುಕಿದ್ದಾನೆ. ಅವುಗಳಲ್ಲಿ ಮುಖ್ಯವಾದವುಗಳನ್ನಷ್ಟು ಇಲ್ಲಿ ವಿವೇಚಿಸುವೆವು.

## ೧. ಹಸ್ತಪ್ರಯೋಗ

ಪುರುಷರು ಇಂದ್ರಿಯವನ್ನು ಕೈಯಿಂದ ಸಂಚಾಲನೆಗೊಳಿಸಿಕೊಂಡು ಉದ್ರೇಕಿಸಿ ವೀರ್ಯಸ್ಖಲನವಾಗುವವರೆಗೂ ಸಂಚಾಲನವನ್ನು ಸಾಗಿಸುವರು. ಸ್ತ್ರೀಯರು ಬೆರಳುಗಳ ಮೂಲಕವಾಗಲಿ, ಅಂಗೈಯ ಮೂಲಕವಾಗಲಿ ಯೋನಿಯನ್ನು ಅಥವಾ ಚಂದ್ರನಾಡಿಯನ್ನು ಘರ್ಷಿಸಿಕೊಳ್ಳುವರು ಪುರುಷರ ಹಸ್ತಪ್ರಯೋಗದಲ್ಲಿ ಸುಖದ ತೀವ್ರತೆಯಿರುವುದು ವೀರ್ಯಸ್ಖಲನದಲ್ಲಿ ಸ್ಖಲನಪೂರ್ವದ ಲಿಂಗಘರ್ಷಣದಲ್ಲಿ ತುಸು ಹರ್ಷವಿರುವುದಾದರೂ ಅದರ ಪರಮಾವಧಿಯಿರುವುದು ವೀರ್ಯಸ್ಖಲನದಲ್ಲಿಯೆ ಸೈ ಲಿಂಗಸಂಚಾಲನದಿಂದ ದೇಹಾದ್ಯಂತ ನರಮಂಡಲವು ಉದ್ರಿಕ್ತವಾಗುವುದು ಸ್ಖಲನಪೂರ್ವದಲ್ಲಿ ಉದ್ರೇಕವು ಶಿಖರಕ್ಕೆ ಮುಟ್ಟುವುದು. ಸ್ಖಲನವಾದ ನಂತರ ಬಹುಬೇಗ ಉದ್ರೇಕವು ಶಾಂತಗೊಳ್ಳುವುದು ಆದರೆ ಸ್ತ್ರೀಯರಲ್ಲಿ ಪುರುಷರಂತೆ ವೀರ್ಯಸ್ಖಲನವಾಗುವುದಿಲ್ಲ. ಆದ್ದರಿಂದ ಹಸ್ತಪ್ರಯೋಗದಲ್ಲಿ ಪುರುಷರಷ್ಟು ಸುಖವನ್ನು ಸ್ತ್ರೀಯರು ಅನುಭವಿಸಲಾರರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಹಾಗೆ ಅಭಿಪ್ರಾಯಪಡುವವರು ಸ್ತ್ರೀಯರಿಗೆ ಸಂಭೋಗದಲ್ಲಿಯೂ ವೀರ್ಯಸ್ಖಲನವಾಗುವುದಿಲ್ಲವೆಂಬುದನ್ನು ನೆನಪಿಗೆ ತಂದುಕೊಳ್ಳಬೇಕು ಸ್ತ್ರೀಯರಿಗೆ ಸ್ಥೂಲವೀರ್ಯವೆ ಇರುವುದಿಲ್ಲವಾದ್ದರಿಂದ ಅದೆಲ್ಲಿಂದ ಸ್ಖಲಿಸಬೇಕು? ಸ್ತ್ರೀಯರ ಸ್ಥೂಲವೀರ್ಯವೆಂದರೆ ಮುಟ್ಟಿನಲ್ಲಿ ಮಾತ್ರ ಸ್ರವಿಸುವ ರಜಸ್ಸೇ. ಹಸ್ತಪ್ರಯೋಗದಲ್ಲಿ ಸ್ತ್ರೀಯರಿಗಾಗುವ ಹರ್ಷದ ಸ್ಥಾನವು ನರಮಂಡಲದಲ್ಲಿಯೆ ಇರುತ್ತದೆ. ಕಾಮೋದ್ರೇಕಗೊಂಡು ಕಾಮುಕ ಚಟುವಟಿಕೆಗಳನ್ನು

ಕೈಕೊಂಡಾಗ ಮೇಲೆ ವಿವರಿಸಿದಂತೆ ನರಮಂಡಲದಲ್ಲಿ ಕ್ರಮೇಣ ಉದ್ರೇಕದ ತೆರೆಯು ಏರುತ್ತ ಪರಮಾವಧಿಯನ್ನು ಮುಟ್ಟಿ ಪುನಃ ಇಳಿಯತೊಡಗುವುದು. ಹಾಗೆ ಉದ್ರೇಕವು ಪರಮಾವಧಿಯನ್ನು ಮುಟ್ಟಿ ಇಳಿಯತೊಡಗುವುದಕ್ಕೆ ಕಾಮದ್ರಾವಣವೆಂದು ಹೆಸರು. (ಇದರ ವಿವೇಚನೆಯು ' ಪ್ರೇಮಕಲೆ 'ಯಲ್ಲಿ ಬಂದಿದೆ ) ಕಾಮತೃಪ್ತಿಗೆ ಆ ದ್ರಾವಣವು ಸ್ತ್ರೀಪುರುಷರಿಬ್ಬರಿಗೂ ಆವಶ್ಯಕ ವಾಗಿದೆ ಪುರುಷನಿಗೆ ಸ್ಖಲನಕಾಲದಲ್ಲಿಯೆ ಸುಖವೆನಿಸಿದರೂ, ಉದ್ರೇಕದ ಪರಮಾವಧಿ ಇಲ್ಲದಾಗ ಸ್ಖಲಿಸಿದರೆ ಅರ್ಥಾತ್ ಶೀಘ್ರಸ್ಖಲನವಾದರೆ ಅವನಿಗೆ ತೃಪ್ತಿಯೆನಿಸದು ಆದ್ದರಿಂದ ಪುರುಷನ ಹಸ್ತಪ್ರಯೋಗದಲ್ಲಿಯ ಸುಖವು ಕೂಡ ದ್ರಾವಣದಲ್ಲಿಯೆ ಇದೆಯೆಂದಂತಾಯಿತು. ಮತ್ತೆ ಸ್ತ್ರೀಯರಿಗೂ ಹಸ್ತಪ್ರಯೋಗದಲ್ಲಿಯ ಸುಖವು ನರಮಂಡಲದ ಪರಮೋದ್ರೇಕ ಮತ್ತು ಶಾಂತಿ ಅರ್ಥಾತ್ ದ್ರಾವಣದಲ್ಲಿದೆಯೆಂದೂ ಸ್ಪಷ್ಟವಾದಂತಾಯಿತು. ಕೆಲವು ಪುರುಷರು ಸಮಗ್ರ ಇಂದ್ರಿಯವನ್ನು ಸಂಚಲಿಸದೆ ಬರಿ ಮಣಿಯ ಮೇಲಷ್ಟೆ ಬೆರಳುಗಳಿಂದ ಘರ್ಷಿಸಿಕೊಳ್ಳುವರು.

ಹಾಗೆ ಹಸ್ತಪ್ರಯೋಗ ಮಾಡಿಕೊಳ್ಳುವಾಗ ತರುಣ ತರುಣಿಯರು ಮನದೆದುರಿನಲ್ಲಿ ತಮ್ಮ ಪ್ರಿಯ ಯುವಕ ಯುವತಿಯರ ಜೀವನ್ಮೂರ್ತಿ ಗಳನ್ನು ತಂದುಕೊಳ್ಳುತ್ತಾರೆ. ಅವರೊಡನೆ ಶೃಂಗಾರಚೇಷ್ಟೆಗಳನ್ನು ಮಾಡಿ ದಂತೆ, ಆಲಿಂಗಿಸಿ ಚುಂಬಿಸಿದಂತೆ, ರತಿಕ್ರೀಡೆಯನ್ನು ಮಾಡಿದಂತೆ ನೆನಸು ವರು. ಆ ಮನಶ್ಚಿತ್ರಗಳು ನರಮಂಡಲವನ್ನು ಇನ್ನೂ ಹೆಚ್ಚಾಗಿ ಉದ್ರೇಕಿಸು ವುದಕ್ಕೆ ಸಾಧಕವಾಗುತ್ತವೆ ಬಹುಶಃ ಒಂದು ಸಲ ಆರಂಭಿಸಿದ ಹಸ್ತ ಪ್ರಯೋಗದ ರೀತಿಯಲ್ಲಿ ವಿಶೇಷ ವ್ಯತ್ಯಾಸವಾಗದಿದ್ದರೂ ಮಾನಸ ಪ್ರಿಯ ಪ್ರಿಯೆಯರೊಡನೆ ಮಾಡುವ ಶೃಂಗಾರಲೀಲೆಗಳು ಮಾತ್ರ ಮೇಲಿಂದ ಮೇಲೆ ಬದಲಾಗುವದುಂಟು. ಏಕೆಂದರೆ ಒಂದೇ ವಿಧದ ಲೀಲಾ ಚಿತ್ರಗಳಿಂದ ಸಾಕಷ್ಟು ಉದ್ರೇಕವು ಆಗದು. ಲೀಲೆಗಳಲ್ಲಿ ವ್ಯತ್ಯಾಸವಾಗುವಂತೆ ಮಾನಸ ಪ್ರಿಯ ವ್ಯಕ್ತಿಗಳೂ ಬದಲಾಗುತ್ತ ಹೋಗಬಹುದು. ಪ್ರಿಯ ಮಾನಸ ವ್ಯಕ್ತಿಗಳು ನಿಜ ಪ್ರಪಂಚದಲ್ಲಿ ಜೀವಿಸಿದ್ದವರಾಗಿರಬಹುದು; ಇಲ್ಲವೆ ಹಸ್ತ ಪ್ರಯೋಗಿಯು ತನ್ನ ಮನಸ್ಸಿಗೆ ಒಪ್ಪುವಂತೆ ಹೆಚ್ಚು ಹೆಚ್ಚಾದ ಉದ್ರೇಕದಾಯಕವಾದ ಆದರ್ಶ ಸುಂದರ ಮೂರ್ತಿಗಳನ್ನು ಕಲ್ಪನಾಸೃಷ್ಟಿ

ಯಲ್ಲಿ ರೇಖಿಸಿಕೊಳ್ಳಬಹುದು. ಸ್ವರತಿಯ ಕ್ರಿಯೆಗಳಲ್ಲಿ ತೀರ ಪ್ರಚಾರ ದಲ್ಲಿರುವ ರೀತಿಯೆಂದರೆ ಹಸ್ತಪ್ರಯೋಗವೆ ಎಂದು ವಿಜ್ಞಾನಿಗಳ ಅಭಿಪ್ರಾಯ ವಾಗಿದೆ.

## ೨. ಕೃತ್ರಿಮ ರತಿಕ್ರಿಯಾನುಕರಣ

ರತಿಕ್ರಿಯೆಗೆ ಒಬ್ಬ ಪ್ರತಿಲಿಂಗಿ ವ್ಯಕ್ತಿಯ ಆವಶ್ಯಕತೆಯಿದೆ ಆದರೆ ಸ್ವರತ ಯುವಕ ಯುವತಿಯರು ಪ್ರತಿಲಿಂಗಿ ವ್ಯಕ್ತಿಯಿಲ್ಲದಿದ್ದರೂ ವಿವಿಧ ಯುಕ್ತಿಗಳಿಂದ ರತಿಲೀಲೆಯ ಅನುಕರಣವನ್ನು ಮಾಡಿ ಸುಖಪಡುವರು. ಕೆಲವರಿಗೆ ತಮ್ಮ ಆ ಲೀಲೆಗಳು ಹಸ್ತಪ್ರಯೋಗದ ವರ್ಗಕ್ಕೇ ಸೇರುವು ವೆಂಬುದು ಕೂಡ ಗೊತ್ತಿಲ್ಲ. ಹಸ್ತಪ್ರಯೋಗದ ವಿರುದ್ಧ ಉಪದೇಶಿಸುತ್ತ ನೀತಿಪ್ರಚಾರವನ್ನು ಮಾಡುತ್ತಿದ್ದ ಒಬ್ಬ ಇಂಗ್ಲೆಂಡಿನ ಸಮಾಜಸೇವಿಕೆಯು ಸ್ವರತಿ ವಿಷಯಕ ಒಂದು ಪುಸ್ತಕವನ್ನು ಓದಿ ತಾನು ಕೂಡ ತನಗೇ ತಿಳಿಯದೆ ವಿಶಿಷ್ಟ ರೀತಿಯಿಂದ ಸ್ವರತಿಗೆ ಬಲಿಬಿದ್ದಿರುವಳೆಂಬುದನ್ನು ತಿಳಿದು ಅಚ್ಚರಿ ಗೊಂಡಳೆಂದು ಹ್ಯಾವ್‌ಲೊಕ್ ಎಲಿಸನು ಬರೆದಿದ್ದಾನೆ. ಒಬ್ಬ ವಿದ್ಯಾರ್ಥಿ ನಮಗೆ ತನ್ನ ಜೀವನವನ್ನು ಹೀಗೆ ತಿಳಿಸಿದ್ದನು "ನಿಮ್ಮ ಕಲಿಯುಗ ಪತ್ರಿಕೆಯಲ್ಲಿ ಮುಷ್ಟಿಮೈಥುನದಿಂದ ಹಾಳಾಗುತ್ತಿರುವ ಅನೇಕ ಮನುಷ್ಯರ ಪತ್ರಗಳನ್ನು ಓದಿ ನಾನಿನ್ನೂ ಆ ಚಟಕ್ಕೆ ಬಿದ್ದಿಲ್ಲವೆಂದು ಸಮಾಧಾನಪಡು ತ್ತೇನೆ. ನಾನು ಈವರೆಗೆ ಮುಷ್ಟಿಮೈಥುನ ಮಾಡಿಕೊಂಡಿಲ್ಲ ಆದರೆ ನನಗೆ ಇನ್ನೊಂದು ಚಟವು ಅಂಟಿದೆ. ಈಗೆರಡು ವರ್ಷಗಳ ಕೆಳಗೆ (ನನಗೆ ಆಗ ೧೪ ವರ್ಷ) ಹಬ್ಬದ ಊಟ ಹೊಡೆದು ಮಧ್ಯಾಹ್ನ ಮಲಗಿದ್ದೆ. ಒಂದು ಕನಸು ಬಿತ್ತು. ಅದರಲ್ಲಿ ನಮ್ಮ ವರ್ಗದ ಒಬ್ಬ ಬಾಲಿಕೆಯ ಸಂಗಡ ಸಹವಾಸ ಮಾಡಿದಂತೆ ಆಯಿತು. ಎಚ್ಚರಾಗಿ ನೋಡುತ್ತೇನೆ, ನಾನು ಡಬ್ಬು ಮಲಗಿ ಇಂದ್ರಿಯವನ್ನು ಹಾಸಿಗೆಗೆ ಸಂಭೋಗಿಸುವ ಹಾಗೆ ತಿಕ್ಕುತ್ತಿದ್ದೇನೆ ನನಗೆ ನಾಚಿಕೆಯಾಯಿತು .. ....ಅಂದಿನಿಂದ ಎಂದಾದರೊಮ್ಮೆ ಹಾಗೇ ಮಾಡಹತ್ತಿದೆ. ಮುಂದೆ ಸುಮಾರು ಹತ್ತು ತಿಂಗಳ ನಂತರ ಹಾಗೆ ಮಾಡಿದಾಗ ಇಂದ್ರಿಯದಿಂದ ಪ್ರವಾಹಿ ವಸ್ತು ಹೊರಗೆ ಬರುವಾಗ ಬಹಳ ಆನಂದವಾಯಿತು. ಮುಂದೆ ಆ ಚಟವು ಹೆಚ್ಚಾಗುತ್ತ ಬಂತು. ಈ ಚಟವೂ ಮುಷ್ಟಿಮೈಥುನದಂತೆ

ದುಷ್ಪರಿಣಾಮ ಮಾಡುವುದೇ ?" ಹೀಗೆ ಹಾಸಿಗೆಯೊಡನೆ ಇಂದ್ರಿಯವನ್ನು ಘರ್ಷಿಸುವ ಸ್ತ್ರೀಪುರುಷರೂ ಬಹಳವಾಗಿದ್ದಾರೆ ಇನ್ನು ಕೆಲವರು ತಲೆಗಿಂಬು ಹಾಸಿಗೆ ಸುರಳಿಗಳನ್ನು ತಬ್ಬಿಕೊಂಡು ಘರ್ಷಿಸಿಕೊಳ್ಳುವರು.

ರಬ್ಬರು, ಸ್ಪಂಜು, ಅರಳೆ ಮುಂತಾದ ಮೃದುವಸ್ತುಗಳಿಂದ ಕೃತ್ರಿಮ ಯೋನಿಯನ್ನು ಮಾಡಿ ಅದರೊಡನೆ ಕ್ರೀಡಿಸುವ ಪರಿಪಾಠವೂ ಉಂಟು. ಒಬ್ಬನಿಗೆ ಸ್ನಾನಮಾಡುವ ಟಬ್ಬಿನ ರಂಧ್ರದೊಡನೆ ಕ್ರೀಡಿಸುವ ಚಟವಿತ್ತೆಂದೂ ಒಂದು ದಿನ ಆ ರಂಧ್ರದಲ್ಲಿ ಉದ್ರಿಕ್ತ ಲಿಂಗವು ಸಿಕ್ಕು ಬಿಡಿಸಿಕೊಳ್ಳಲಾಗದಿರಲು ಅವನ ಸಹಾಯಕ್ಕೆ ಜನರು ಓಡಿಬಂದು ಟಬ್ಬನ್ನು ಕತ್ತರಿಸಬೇಕಾಯಿತೆಂದೂ ಎನ್‌ಸೈಕ್ಲೊಪೀಡಿಯಾ ಆಫ್ ಸೆಕ್ಸುಅಲ್ ನೊಲೆಜದಲ್ಲಿ ಬರೆದಿದೆ ಡಾಕ್ಟರ್ ಮ್ಯಾಗ್ನಸ್ ಹರ್ಶಫೀಲ್ಡನಿಗೆ ಒಬ್ಬ ಸೆರೆಯಾಳು ತನ್ನ ಸಂಗತಿಯನ್ನು ಹೀಗೆ ಹೇಳಿದ್ದಾನೆ: "ನನಗೆ ಕೊಡುತ್ತಿದ್ದ ರೋಟಿನ (ಬ್ರೆಡ್) ತುಂಡನ್ನೆ ನಾನು ಯೋನಿರೂಪಕ್ಕೆ ತಿರುಗಿಸುತ್ತಿದ್ದೆ. ಅದು ಒಣಗಿದಾಗ ಹೊರಭಾಗವು ಬಿರುಸಾಗಿಯೂ ಒಳಭಾಗವು ಮೃದುವಾಗಿಯೂ ಇರುತ್ತಿತ್ತು. ಅವಶ್ಯವಿದ್ದಾಗ ಆ ಯೋನಿಯಲ್ಲಿ ವ್ಯಾಸಲೀನಿನಂತಹ ಸ್ನಿಗ್ಧಪದಾರ್ಥವನ್ನು ಲೇಪಿಸಿಕೊಳ್ಳುತ್ತಿದ್ದೆ. ಸಜೀವ ಸಮಾಗಮವು ಸಾಧ್ಯವಿಲ್ಲದಾಗ ಈ ನನ್ನ ಕಲಾಕೃತಿಯು ಸಾಕಷ್ಟು ತೃಪ್ತಿಕರವಾಗಿದೆ." ಅದೇ ಸೆರೆಯಾಳಿ ಆಹಾರಕ್ಕಾಗಿ ಉಪಯೋಗಿಸುವ ಮಾಂಸದಿಂದಲೂ ಕೃತ್ರಿಮ ಇಂದ್ರಿಯವನ್ನು ಮಾಡಲು ಬರುವುದೆಂದು ಹೇಳಿದ್ದಾನೆ.

ಪುರುಷರು ಕೃತ್ರಿಮ ಯೋನಿಗಳನ್ನು ತಯಾರಿಸಿದಂತೆ ಸ್ತ್ರೀಯರು ಪುರುಷೇಂದ್ರಿಯ ಸದೃಶವಾದ ವಸ್ತುಗಳನ್ನೂ ತಯಾರಿಸಿಕೊಳ್ಳುವ ರೂಢಿಯು ಬಹು ಪುರಾತನಕಾಲದಿಂದಲೂ ಇದೆ. ಕೃತ್ರಿಮ ಲಿಂಗಗಳು ಚೀನ, ಪಶ್ಚಿಮ ಏಶಿಯಾ, ಮಧ್ಯಯುರೋಪಗಳಲ್ಲಿ ಬಹಳ ಪ್ರಚಾರದಲ್ಲಿದ್ದವೆಂದೂ ಈಗಲೂ ಕೂಡ ಯುರೋಪದಲ್ಲಿ ಕೃತ್ರಿಮ ಲಿಂಗಗಳು ಉಪಯೋಗಿಸಲ್ಪಡುತ್ತಿವೆಯೆಂದೂ ಹ್ಯಾವ್‌ಲೊಕ್ ಎಲಿಸನು ಹೇಳುತ್ತಾನೆ. ಬಹುಶಃ ಅಂತಹ ಲಿಂಗಗಳನ್ನು ಬೆಳ್ಳಿಯಿಂದ ಮಾಡುತ್ತಾರಂತೆ. ಒಂದು ಹಿಡಿಕೆಯ ಸಹಾಯದಿಂದ ಆ ಲಿಂಗವು ಸ್ವಯಂಚಲನೆಯುಳ್ಳದ್ದಾಗುವುದೆಂದು ಅದರ ವರ್ಣನೆಯಿಂದ ವ್ಯಕ್ತವಾಗುತ್ತದೆ. ನಮಗೆ ಬಂದಿರುವ ಕೆಲವು ಪತ್ರಗಳಿಂದ ಭಾರತದಲ್ಲಿಯೂ

ಕೃತ್ರಿಮ ಲಿಂಗಗಳ ಪ್ರಚಾರವು ಇದ್ದಂತೆ ತೋರುತ್ತದೆ. ಹಾಗೆ ಕೃತ್ರಿಮವಾದ ಇಂದ್ರಿಯವಲ್ಲದೆ ಪುರುಷೇಂದ್ರಿಯವನ್ನು ಹೋಲುವ ಅನೇಕ ವಸ್ತುಗಳನ್ನು ಸ್ತ್ರೀಯರು ಸ್ವರತಿಗಾಗಿ ಉಪಯೋಗಿಸುವರೆಂದು ಕಂಡುಬಂದಿದೆ. ಸುಪ್ರಸಿದ್ಧ ಕಾಮವಿಜ್ಞಾನಿಗಳೆದುರು ಅಸಂಖ್ಯ ಯುವತಿಯರು ತಾವು ಸ್ವರತಿಗಾಗಿ ಉಪಯೋಗಿಸುತ್ತಿದ್ದ ವಸ್ತುಗಳ ಹೆಸರನ್ನು ಹೇಳಿದ್ದಾರೆ. ಅವುಗಳಲ್ಲಿ ಮೂಲಂಗಿ, ಗಜ್ಜರಿ, ಬದನೆಕಾಯಿ, ಬಾಳೆಹಣ್ಣು ಸೀಸಕಡ್ಡಿ, ಸೀಲುಮಾಡುವ ಅರಗಿನ ಕಡ್ಡಿ, ದಾರದ ಗಡಗಡೆ (ರೀಲು), ಕೂದಲ ಪಿನ್ನು, ಗಾಜಿನ ಬೂಚು, ರಬ್ಬರು ಬೂಚು, ನೀರು ಕುಡಿಯುವ ಗ್ಲಾಸು, ಮೇಣಬತ್ತಿ ಮುಂತಾದವು ಪ್ರಾಮುಖ್ಯವಾಗಿವೆ. ಕೆಲವು ಸಲ ಯೋನಿಯ ಅಥವಾ ಮೂತ್ರಮಾರ್ಗದ ಶೋಷಣಕ್ರಿಯೆಯಿಂದ ಆ ವಸ್ತುಗಳು ಮೂತ್ರಾಶಯ ಅಥವಾ ಗರ್ಭಾಶಯ ದಲ್ಲಿ ಹೋಗಿ ಸಿಕ್ಕಿಕೊಂಡು ಕಾಲಾಂತರದಲ್ಲಿ ಹೊಟ್ಟೆಶೂಲೆಯಂತಹ ಬೇನೆ ಗಳನ್ನು ಹುಟ್ಟಿಸುವುದುಂಟು. ಸ್ತ್ರೀಯರ ರೋಗವಿಜ್ಞಾನಿಗಳಾದ ಶಸ್ತ್ರವೈದ್ಯರು ಅನೇಕ ಸ್ವರತ ಸ್ತ್ರೀಯರ ಮೂತ್ರಾಶಯದಿಂದ ಮೇಲೆ ವಿವರಿಸಿದ ವಸ್ತುಗಳನ್ನು ತೆಗೆದಿದ್ದಾರೆಂದು ಸೈಕೊಲೊಜಿ ಆಫ್ ಸೆಕ್ಸ್ ಗ್ರಂಥದಲ್ಲಿ ಹೇಳಿದೆ ಅವರೆಲ್ಲ ೧೬ ರಿಂದ ೩೦ ವರ್ಷಗಳೊಳಗಿನ ಯುವತಿಯರೆ ಆಗಿರುವರಂತೆ. ಕೆಲಕೆಲವು ಆಸ್ಪತ್ರೆಗಳಲ್ಲಿ ಮಕ್ಕಳ ಆರೈಕೆಯನ್ನು ಮಾಡುವ ತರುಣ ದಾದಿಯರು ಮಕ್ಕಳ ಪಾದ, ಹಿಂಬಡ, ಕೈಗಳನ್ನು ಸ್ವರತಿಗಾಗಿ ಉಪಯೋಗಿಸಿಕೊಳ್ಳುವ ರೆಂದು ಅನೇಕ ವಿಜ್ಞಾನಿಗಳಿಗೆ ತಿಳಿದುಬಂದಿದೆ.

## ೩. ಅಂಗಘರ್ಷಣ

ಹುಡುಗಿಯರಲ್ಲಿ ಹಸ್ತಪ್ರಯೋಗಕ್ಕಿಂತ ಇಂದ್ರಿಯವನ್ನು ಒಂದು ಸ್ಥಿರ ವಸ್ತುವಿನೊಡನೆ ಘರ್ಷಿಸುವ ಪ್ರವೃತ್ತಿಯ ಹೆಚ್ಚಾಗಿದೆಯೆಂದು ಹ್ಯಾವ್ ಲೊಕ್ ಎಲಿಸನು ಅನ್ನುತ್ತಾನೆ. ಅದಕ್ಕಾಗಿ ಆ ಹುಡುಗಿಯರು ಕುರ್ಚಿಯ ಕೈ, ಮೇಜಿನ ತುದಿ, ಕಂಬ ಮುಂತಾದ ವಸ್ತುಗಳನ್ನು ಆಶ್ರಯಿಸುವರು. ಮುಗ್ಧ ಬಾಲಬಾಲಿಕೆಯರೊಡನೆ ಸಲಿಗೆಯಿಂದಿರುವಾಗ ಅವರ ಮೊಣಕಾಲು ಗಳನ್ನು ಇಂದ್ರಿಯ ಘರ್ಷಣಕ್ಕೆ ಉಪಯೋಗಿಸುವುದೂ ಉಂಟು. ಗಂಡಸರಲ್ಲಿ ಕೂಡ ಅಂಥ ಚಟವುಳ್ಳವರು ಅನೇಕರಿದ್ದಾರೆಂದು ನಮಗೆ ಬಂದ ಪತ್ರಗಳಿಂದ

ತೀಯುತ್ತದೆ. ಅವರು ಏನೂ ಅರಿಯದ ಬಾಲಬಾಲಿಕೆಯರೊಡನೆ ಆಡುತ್ತಿರುವ ನೆವದಿಂದ ಅವರ ವಿವಿಧಾಂಗಗಳಿಗೆ ತಮ್ಮ ಇಂದ್ರಿಯವನ್ನು ತಿಕ್ಕಿಕೊಳ್ಳುವರು. ಅಂಥ ದುರ್ಜನರ ಸ್ವರತಿಗೆ ಗುರಿಯಾಗಿ ಕ್ರಮೇಣ ತಾವೂ ಸ್ವರತಿಗೆ ಬಲಿಬಿದ್ದ ಯುವಕ ಯುವತಿಯರ ಉದಾಹರಣೆಗಳು ನಮಗೆ ಗೊತ್ತಿವೆ.

ತೊಡೆಗಳನ್ನು ಒಂದಕ್ಕೊಂದು ತಿಕ್ಕಿಕೊಂಡು ಸ್ವೋದ್ರೇಕಸುಖವನ್ನನುಭವಿಸುವ ಸ್ತ್ರೀಪುರುಷರೂ ಇದ್ದಾರೆ. ಅವರು ತೊಡೆಗಳನ್ನು ತಿಕ್ಕಿಕೊಳ್ಳುತ್ತಿದ್ದರೂ ಅದರ ಪರಿಣಾಮದಿಂದ ಇಂದ್ರಿಯ ಘರ್ಷಣವುಂಟಾಗುವುದೆಂದು ಊಹಿಸುವದು ಸುಲಭ ತೊಡೆಗಳನ್ನು ತಿಕ್ಕಿಕೊಳ್ಳುವ ಸ್ವರತಾಭ್ಯಾಸವು ಸ್ವೀಡನ ದೇಶದ ತರುಣಿಯರಲ್ಲಿ ವಿಶೇಷವಾಗಿ ಪ್ರಚುರವಾಗಿದೆ. ಹಸ್ತಪ್ರಯೋಗಕ್ಕಿಂತ ಅದೇ ಅಲ್ಲಿ ಹೆಚ್ಚಾಗಿದೆಯೆಂದು ಎಲಿಸನು ಹೇಳುತ್ತಾನೆ. ಕುದುರೆ ಹತ್ತುವುದು, ಸೈಕಲ್ ನಡೆಸುವುದು, ಹೊಲಿಗೆಯ ಯಂತ್ರ ನಡೆಸುವುದು ಮುಂತಾದ ಕೆಲಸಗಳಲ್ಲಿಯೂ ತೊಡೆಗಳ ತಿಕ್ಕಾಟವಾಗಿ ತನ್ಮೂಲಕ ಇಂದ್ರಿಯ ಘರ್ಷಣದ ಸುಖವನ್ನು ಪಡೆಯುವ ಸ್ತ್ರೀಪುರುಷರೂ ಬೇಕಾದಷ್ಟಿದ್ದಾರೆ.

## ೪. ಅನಿಂದ್ರಿಯೋದ್ರೇಕ

ಪ್ರತ್ಯಕ್ಷವಾಗಿ ಜನನೇಂದ್ರಿಯಗಳಿಗೆ ಸಂಬಂಧಿಸದ ಬೇರೆ ಅಂಗಗಳ ಸಂಚಾಲನ, ಘರ್ಷಣಗಳಿಂದ ಹಲವರು ಸ್ವೋದ್ದೀಪನವನ್ನು ಮಾಡಿಕೊಳ್ಳುವರು. ಅವುಗಳಲ್ಲಿ ಮೊಲೆ, ಕೆನ್ನೆ, ಜಘನಗಳು ಮುಖ್ಯವಾಗಿವೆ. ಪ್ರಾಚೀನ ಕಾಮವಿಜ್ಞಾನಿಗಳು ಮೊಲೆಗಳನ್ನು ಕಾಮಾಂಗಗಳಲ್ಲಿಯೆ ಸಮಾವೇಶಗೊಳಿಸಿದ್ದಾರೆ ಆದ್ದರಿಂದ ಕೆಲವು ಸ್ತ್ರೀಯರಿಗೆ ಸ್ತನಘರ್ಷಣ, ಮರ್ದನಗಳಿಂದ ಇಂದ್ರಿಯೋದ್ರೇಕದಷ್ಟೆ ಉದ್ದೀಪನವಾಗುವದು. ವಿಶಿಷ್ಟವಾಗಿ ಮೊಲೆತೊಟ್ಟುಗಳು ಹೆಚ್ಚು ಸಂವೇದನಾಶೀಲವಾಗಿರುವುದರಿಂದ ಹುಡುಗಿಯರು ಸ್ವರತಿಯಲ್ಲಿ ಮೊಲೆತೊಟ್ಟುಗಳನ್ನು ತಿಕ್ಕಿಕೊಳ್ಳುವರೆಂದು ಡಾ. ಡಿಕಿನ್‌ಸನ್ನನು ಹೇಳುತ್ತಾನೆ. ಸ್ತನಗಳನ್ನು ಸ್ಥಿರವಸ್ತುಗಳೊಡನೆ ಅಥವಾ ಮುಗ್ಧ ಬಾಲಬಾಲಿಕೆಯರ ಮೈಗೆ ತಿಕ್ಕುವುದರಿಂದಲೂ ಅವರು ಸ್ವರತಿಯ ಸುಖವನ್ನು ಅನುಭವಿಸುವರು. ಪ್ರಾಚೀನ ಸಂಸ್ಕೃತ ಕಾವ್ಯಗಳಲ್ಲಿ ಸ್ತ್ರೀಯರಿಗೆ ಕಾಮೋದ್ರೇಕವಾದಾಗ ಬಾಳೆಯ ಎಳೆಯೆಲೆಗಳ ಶಯ್ಯೆಯಲ್ಲಿ ಮಲಗಿ ಆ ಎಲೆಗಳಿಗೆ

ಸ್ತನಗಳನ್ನು ಘರ್ಷಿಸುತ್ತಿದ್ದರೆಂದೂ, ಅವರ ಕಾಮಜ್ವಾಲೆಯಿಂದ ತಪ್ತವಾದ ಸ್ತನಗಳ ಬಿಸಿಯಿಂದ ಎಲೆಗಳು ಬಾಡುತ್ತಿದ್ದವೆಂದೂ ವರ್ಣನೆಗಳು ಬರುತ್ತವೆ. ಪುರುಷರಲ್ಲಿಯೂ ಕೆಲವರು ಸ್ತನಘರ್ಷಣದಿಂದ ಸುಖಪಡುವವರಿದ್ದಾರೆಂದು ಡಾ. ನಾರ್ಮನ್‌ಹೇರನ ಅಭಿಪ್ರಾಯವಿದೆ. ಒಬ್ಬ ೫೦ ವರ್ಷದ ಮನುಷ್ಯನು ಕನ್ನಡಿಯ ಮುಂದೆ ನಿಂತುಕೊಂಡು ಮೊಲೆತೊಟ್ಟು ತಿಕ್ಕಿಕೊಂಡು ಉತ್ತೇಜಿತ ನಾಗಿ ವೀರ್ಯಸ್ಖಲನವನ್ನು ಅನೇಕ ವರ್ಷಗಳವರೆಗೆ ಹೊಂದುತ್ತಿದ್ದನೆಂದು ಎನ್‌ಸೈಕ್ಲೊಪೀಡಿಯದಲ್ಲಿದೆ.

ಪುರಾತನ ಕಾಮಶಾಸ್ತ್ರಗಳಲ್ಲಿ ಜಘನ(ತ್ರಿಕ)ದ ವರ್ಣನೆಯೂ ಬೇಕಾದಷ್ಟು ಬಂದಿದೆ. ಕೆಲವು ಸ್ತ್ರೀಪುರುಷರು ಜಘನಗಳನ್ನು ಮರ್ದಿಸಿ ಕೊಳ್ಳುವುದರಿಂದ ಸುಖಪಡುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಕೆಲವು ತರುಣ ತರುಣಿಯರಿಗೆ ಜಘನಗಳ ಮೇಲೆ ವಿಶಿಷ್ಟ ಸಾಧನಗಳಿಂದ ಹೊಡೆಸಿಕೊಂಡು ಕಾಮತೃಪ್ತಿಯನ್ನು ಹೊಂದುವ ರೂಢಿಯಿದೆಯಂತೆ. ಆ ವಿಷಯಕ ಇಂಗ್ರೇಜಿ ಸಾಹಿತ್ಯವೂ ಬೇಕಾದಷ್ಟಿದೆ ಒಬ್ಬ ವಿದ್ಯಾರ್ಥಿಗೆ ತನ್ನ ಪ್ರಿಯ ವ್ಯಕ್ತಿಯ ನೆನಪಿನಿಂದ ಕಾಮೋದ್ರೇಕವಾದಾಗ ಅವನು ತನ್ನ ಜಘನಗಳ ಮರ್ದನದಿಂದ ವೀರ್ಯಸ್ಖಲನವನ್ನು ಪಡೆಯುತ್ತಿದ್ದನೆಂದು ಪ್ರೊ ಲೀಪಮನ್‌ನು ಹೇಳಿದ್ದಾನೆ. ಕೆನ್ನೆಗಳನ್ನು ಚುಚುಕಿಕೊಂಡು ಕಾಮತೃಪ್ತಿಯನ್ನು ಪಡೆಯುವ ಅಭ್ಯಾಸವೂ ಇದೆ. ಅದು ಹೆಂಗಸರಲ್ಲಿ ವಿಶೇಷವಾಗಿರುವುದೆಂದು ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ.

ಕೆಲವು ಸ್ತ್ರೀಪುರುಷರಿಗೆ ಗುದದ್ವಾರವು ಕಾಮಸ್ಥಾನವಾಗಿರುತ್ತದೆ. ಆದ್ದರಿಂದ ಅವರು ವಿವಿಧ ವಸ್ತುಗಳನ್ನು ಅದರಲ್ಲಿ ಹಾಕಿಕೊಂಡು ಘರ್ಷಿಸಿ ಕೊಳ್ಳುವರೆಂದು ಎನ್‌ಸೈಕ್ಲೊಪೀಡಿಯದಲ್ಲಿ ಹೇಳಿದೆ. ಗುದದ್ವಾರದಿಂದ ತುಸು ಮೇಲ್ಗಡೆಯಲ್ಲಿರುವ ಪ್ರಸ್ಥಿತ ಗ್ರಂಥಿಯು ಆ ವಸ್ತುಗಳಿಗೆ ತಗಲುವುದರಿಂದ ಆ ಸಮಯದಲ್ಲಿ ಪುರುಷರಿಗೆ ಲಿಂಗೋದ್ರೇಕವೂ ಆಗಿ ವೀರ್ಯಸ್ಖಲನವಾಗ್ತು ವುದು. ಹಾಗೆ ಗುದಸಂಪರ್ಕಕ್ಕಾಗಿ ಉಪಯೋಗಿಸುತ್ತಿದ್ದ ಒಂದು ವಸ್ತುವು ಬರ್ಲಿನಿನ ಸೆಕ್ಸೊಲೊಜಿಕಲ್ ಇನ್‌ಸ್ಟಿಟ್ಯೂಟದಲ್ಲಿ ಸಂಗ್ರಹಿಸಿಡಲಾಗಿತ್ತು. ಅದು ೧೬ ಸೆ. ಮಿ. ಉದ್ದ, ೫ ಸೆ. ಮಿ. ದಪ್ಪವಾಗಿತ್ತಂತೆ. ನಾಝಿ ಆಳಿಕೆ ಪ್ರಾರಂಭವಾದ ಮೇಲೆ ಆ ಸಂಸ್ಥೆಯನ್ನು ಹಾಳುಮಾಡಲಾಗಿದೆಯಂತೆ.

## ೫. ಮಾನಸಿಕ ಸ್ವರತಿ

ಈವರೆಗೆ ವಿವರಿಸಿದ ಸ್ವರತಿಗಳಲ್ಲಿ ಬಾಹ್ಯವಾಗಿ ಯಾವುದೆ ಅಂಗದ ಚಾಲನ ಘರ್ಷಣಗಳನ್ನು ಮಾಡಿಕೊಂಡರೂ ಮನಸ್ಸಿನಲ್ಲಿ ಆ ಸಮಯಕ್ಕೆ ಒಂದು ಕಾಮುಕ ಚಿತ್ರವಿದ್ದೇ ಇರುತ್ತದೆ. ಬಾಹ್ಯಚಲನ ಘರ್ಷಣಗಳ ದುಷ್ಪರಿಣಾಮಗಳ ಬಗ್ಗೆ ಅಂಜಿ ಅಥವಾ ಜನನೇಂದ್ರಿಯಗಳು ಅಸಹ್ಯವೆಂಬ ಸಂಸ್ಕಾರಗಳಲ್ಲಿ ಬೆಳೆದು ಅವನ್ನು ಮುಟ್ಟಲು ಹೇಸಿ ಕೆಲವು ತರುಣ ತರುಣಿಯರು ಬರಿ ಮಾನಸಿಕ ಕಾಮುಕ ಕಲ್ಪನೆಗಳಲ್ಲಿಯೆ ರಮಿಸುವುದುಂಟು. ಮನಸ್ಸಿನಲ್ಲಿ ಪ್ರಿಯ ಪ್ರಿಯೆಯರೊಡನೆ ಹಲವು ವಿಧದಲ್ಲಿ ಕಾಮಲೀಲೆ ಯಾಡುತ್ತಿದ್ದರೂ ಅವರು ಜನನೇಂದ್ರಿಯವನ್ನು ಮುಟ್ಟಹೋಗುವದಿಲ್ಲ. ಮನಸ್ಸಿನ ಕಾಮಚಿತ್ರಗಳಿಂದ ಇಂದ್ರಿಯಗಳು ಉದ್ರೇಕಗೊಳ್ಳುವವು. ಹಸ್ತ ಪ್ರಯೋಗದಿಂದಾಗುವಷ್ಟೆ ನರಮಂಡಲದ ಉದ್ದೀಪನವೂ ಆಗುವದು. ಕೆಲವು ಹೊತ್ತು ಹಾಗೆ ಚಿತ್ತಕ್ಷೇತ್ರದಲ್ಲಿ ರತರಾಗುವದರಿಂದ ವೀರ್ಯಸ್ಖಲನವೂ ಆಗುವದು.

ಕಲ್ಪನಾಶಕ್ತಿ ವಿಶೇಷವಾಗಿರುವವರೂ ಸೂಕ್ಷ್ಮ ಪ್ರಕೃತಿಯವರೂ ವಿಶೇಷವಾಗಿ ಮಾನಸಿಕ ಸ್ವರತಿಯ ಪ್ರವೃತ್ತಿಯುಳ್ಳವರಾಗಿರುವರು. ಆಗಾಗ್ಗೆ ಹಸ್ತಪ್ರಯೋಗವನ್ನು ಮಾಡಿಕೊಳ್ಳುವವರು ಕೂಡ ಮಾನಸಿಕ ಸ್ವರತಿಯಲ್ಲಿ ಮಗ್ನರಾಗುವರು. ಅವರಿಗೆ ಇಂದ್ರಿಯಗಳು ಉದ್ದೀಪಿತವಾಗು ವವಾದರೂ ವೀರ್ಯಸ್ಖಲನವಾಗುವದಿಲ್ಲ. ಹಸ್ತಪ್ರಯೋಗದಿಂದ ಅಲಿಪ್ತ ರಾಗಿರುವವರಿಗೆ ಸ್ಖಲನವಾಗುವ ಸಂಭವ ಹೆಚ್ಚಾಗಿರುತ್ತದೆ. ಮಾನಸಿಕ ಸ್ವರತಿಯು ನಿರಂತರಾವಧಿಯವರೆಗೆ ಸಾಗಿ ಸಾಕಷ್ಟು ಉದ್ರೇಕವನ್ನು ಸಲ್ಲಿಸ ಬೇಕಾದರೆ ಕಲ್ಪನಾಶಕ್ತಿಯು ಬಲು ಚುರುಕಾಗಿರಬೇಕಾಗುವದು. ಏಕೆಂದರೆ ಪ್ರತಿಸಲದ ರತಿಯಲ್ಲಿ ಮನಸ್ಸಿನಲ್ಲಿ ಹೊಸ ಹೊಸ ಕಾಮುಕ ಸನ್ನಿವೇಶಗಳನ್ನು ಕಲ್ಪಿಸಿ ಉದ್ರಿಕ್ತರಾಗಬೇಕಾಗುತ್ತದೆ. ಅದಕ್ಕಾಗಿ ಕಲ್ಪನಾಶಕ್ತಿಯುಳ್ಳವರು ತಮ್ಮ ಮಿದುಳಿನಿಂದಲೆ ಹೊಸ ಸನ್ನಿವೇಶಗಳನ್ನು ಸೃಷ್ಟಿಸಿಕೊಳ್ಳುವರು. ಅದಿಲ್ಲದವರು ಕಾದಂಬರಿ, ಸಿನೆಮಾ, ನಾಟಕಗಳಲ್ಲಿಯ ಸನ್ನಿವೇಶಗಳನ್ನು ನೆನಪಿಸಿಕೊಳ್ಳುವರು. ಅವುಗಳಲ್ಲಿಯ ನಾಯಕನು ತಾನೆಂದು ತರುಣನೂ, ನಾಯಕಿಯು ತಾನೆಂದು ತರುಣಿಯೂ ಕಲ್ಪಿಸಿಕೊಳ್ಳುವರು. ನಂತರ ಆ

ಕತೆಗಳಲ್ಲಿಯ ಸಂದರ್ಭಗಳನ್ನು ಮಾನಸಲೋಕದಲ್ಲಿ ಸೃಷ್ಟಿಸಿಕೊಂಡು ಅದರ ಲ್ಲಿಯ ನಾಯಕ, ನಾಯಕಿಯರೊಡನೆ ಚುಂಬನಾಲಿಂಗನಗಳಲ್ಲಿ ತನ್ಮಯತೆ ಯನ್ನು ಪಡೆಯುವರು. ಆ ಕತೆಗಳಲ್ಲಿ ಸಂಭೋಗದ ದೃಶ್ಯಗಳಿಲ್ಲದಿದ್ದರೂ ಅದನ್ನು ತಾವಾಗಿ ಕಲ್ಪಿಸಿಕೊಂಡು ರತರಾಗುವರು. ಅದಕ್ಕೆ ಡಾ. ಹ್ಯಾಮಂಡನು ಮಾನಸಿಕ ಸಂಭೋಗವೆಂದು ಹೆಸರಿಟ್ಟಿದ್ದಾನೆ.

ಮಾನಸಿಕ ಸ್ವರತಿಯಲ್ಲಿ ಒಳ್ಳೆ ಕೌಶಲ್ಯದಿಂದ ಅನುಭವಿಸುತ್ತಿರುವಾಗ ಸ್ವರತರಿಗೆ ಚಮತ್ಕಾರಿಕ ಕಲ್ಪನೆಗಳು ಹೊಳೆಯುವದುಂಟು. ಅವರು ಕವಿ ಗಳೂ, ಸಾಹಿತಿಗಳೂ, ಕಲಾವಿದರೂ ಆಗಿದ್ದರೆ ಅವರ ಕೃತಿಗಳಲ್ಲಿ ಸ್ವರತಿಯ ವಾಸನೆ ಹೊಡೆಯುವದೆಂದು ಬಲ್ಲವರು ಹೇಳುತ್ತಾರೆ. ಹ್ಯಾವಲೊಕ ಎಲಿಸನು ಕೂಡ, ಸ್ವರತಿಯಿಂದ ಪ್ರಭಾಸಿತರಾಗಿ ಸೃಷ್ಟಿಸಿದ ಕಲಾಕೃತಿಗಳಿಂದ ಪ್ರಸಿದ್ಧಿ ಯನ್ನು ಹೊಂದಿದ ಕೆಲವು ಕಲಾವಿದರನ್ನು ಉಲ್ಲೇಖಿಸಿದ್ದಾನೆ. ಕೌಮಾರಾ ವಸ್ಥೆಯ ಅಂತ್ಯದಲ್ಲಿ ಅಥವಾ ತಾರುಣ್ಯದ ಹೊಸ್ತಿಲಲ್ಲಿ ಮಾನಸಿಕ ಸ್ವರತಿಯು ಪ್ರಬಲವಾಗಿರುತ್ತದೆ. ಕೆಲವು ತರುಣ ತರುಣಿಯರಿಗೆ ಸ್ವರತಿಯಲ್ಲಿ ಧರ್ಮ ನಿಷಿದ್ಧವೆನಿಸಿದ ಕಾಮುಕ ಚಿತ್ರಗಳು ಹೊಳೆದು ತೊಂದರೆಕೊಡುತ್ತವೆ. ನಮಗೆ ಬಂದ ಪತ್ರಗಳಲ್ಲಿಯ ಒಂದರಲ್ಲಿ ಒಬ್ಬ ತರುಣನು ಬೇರೆ ಊರಲ್ಲಿ ಪೋಷಿಸಲ್ಪಟ್ಟು ಬೆಳೆದ ತನ್ನ ಸುಂದರ ತರುಣಿ ಸಹೋದರಿಯೊಡನೆ ಕಾಮುಕ ಚೇಷ್ಟೆಗಳನ್ನು ಮಾಡಿದಂತೆ ಕಲ್ಪನೆಗಳು ಮನಸ್ಸಿನಲ್ಲಿ ಮಿಂಚುತ್ತ ವೆಂದು ಗೋಳಾಡಿಕೊಂಡಿದ್ದಾನೆ. ಮಾನಸಿಕ ಸ್ವರತಿಯೆಂದರೆ ಅದು ಜಾಗೃತ ಸ್ವಪ್ನವಿದ್ದಂತೆ.

ಅದರಲ್ಲಿ ದಿವಾಸ್ವಪ್ನವೆಂದೂ ( day dreaming ), ನಿಶಾಸ್ವಪ್ನವೆಂದೂ ( night dreaming ) ಎಂದೂ ಎರಡು ಪ್ರಕಾರಗಳಿವೆಯೆನ್ನಬಹುದು. ದಿವಾ ಸ್ವಪ್ನದಲ್ಲಿ ನಿದ್ದೆಹತ್ತುವದಿಲ್ಲ. ಕಣ್ಣು ಮುಚ್ಚಿಕೊಂಡು ಇಲ್ಲವೆ ಕೈಯಲ್ಲಿ ಪ್ರಿಯ ಪ್ರಿಯೆಯರ ಸುಂದರ ಭಾವಚಿತ್ರಗಳನ್ನು ಹಿಡಿದು ನೋಡುತ್ತ ಅವ ರೊಡನೆ ಮಾನಸ ಕಾಮಲೀಲೆಗಳನ್ನು ರೇಖಿಸಿಕೊಳ್ಳುವರು. ಡಾ. ಹ್ಯಾಮಿ ಲ್ಟನ್ನನು ಮಾಡಿರುವ ಸಂಶೋಧನೆಗಳಿಂದ ನೂರಕ್ಕೆ ೨೭ ತರುಣರೂ ೨೫ ತರುಣಿಯರೂ ದಿವಾಸ್ವಪ್ನದ ವಿಲಾಸವನ್ನು ಅನುಭವಿಸುವರೆಂದು ಕಂಡು

ಬಂದಿದೆ. ಶುಕ್ರೋದಯವಾದ ಮೊದಲುಗೊಂಡು ಮದುವೆಯಾಗುವವರೆಗಿನ ತಮ್ಮ ಜೀವನದ ಮೇಲೆ ದಿವಾಸ್ವಪ್ನಗಳು ವಿಶೇಷವಾದ ಪರಿಣಾಮವನ್ನುಂಟು ಮಾಡಿದವೆಂದು ನೂರಕ್ಕೆ ೫೭ ಪುರುಷರೂ ೫೧ ಸ್ತ್ರೀಯರೂ ಒಪ್ಪಿದ್ದಾರೆ. ದಿವಾಸ್ವಪ್ನದ ಪೂರ್ವದಲ್ಲಿ ಉದ್ರೇಕಕ್ಕೆ ಸಹಾಯಕವಾಗುವಂತಹ ಉತ್ತಾನ ಶೃಂಗಾರಪೂರಿತ ವರ್ಣನೆಗಳನ್ನೂ ಕವಿತೆಗಳನ್ನೂ ಓದುವ ಪರಿಪಾಠವೂ ಉಂಟು. ಕೆಲವರು ಹಾಗೆ ಉದ್ರೇಕಿಸಿಕೊಳ್ಳಲೆಂದು ಶ್ರೀಕೃಷ್ಣ ಕಂಠಾಭರಣ, ಗೀತಗೋವಿಂದ, ವೈರಾಗ್ಯಶತಕ, ಭಾಗವತ, ಭಾರತ ಮುಂತಾದ ಧಾರ್ಮಿಕ ಪುಸ್ತಕಗಳನ್ನು ಉಪಯೋಗಿಸುವರೆಂದೂ ಕಂಡುಬಂದಿದೆ.

ನಿಶಾಸ್ವಪ್ನದಲ್ಲಿ ದಿವಾಸ್ವಪ್ನದಂತೆಯೆ ಎಲ್ಲ ಸಂಗತಿಗಳು ನಡೆಯುವವಾದರೂ ಅವು ಅರ್ಧ ನಿದ್ರಾವಸ್ಥೆಯಲ್ಲಿ ಸಂಭವಿಸುವವೆನ್ನಬಹುದು. ನಿಶಾಸ್ವಪ್ನದಲ್ಲಿಯ ಕಾಮುಕ ಲೀಲೆಗಳಿಂದಲೂ ಇಂದ್ರಿಯಗಳು ಉದ್ದೀಪಿತವಾಗಿ ದ್ರಾವಣವಾಗುವದು. ಆದರೆ ಅವನ್ನು ಸ್ವಪ್ನಸ್ಖಲನದ ವರ್ಗದಲ್ಲಿ ಸೇರಿಸ ಕೂಡದೆಂದು ಕೆಲವು ವಿಜ್ಞಾನಿಗಳೆನ್ನುತ್ತಾರೆ ಫ್ರಾಯಿಡನು ಸ್ವಪ್ನಾವಸ್ಥೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾನೆ. ಅತೃಪ್ತ ಕಾಮವಾಸನೆಗಳು ಸ್ವಪ್ನದಲ್ಲಿ ತೃಪ್ತವಾಗಲೆಳಸುವವೆಂದು ಅವನ ಸಿದ್ಧಾಂತವಿದೆ (ಈ ವಿಷಯವನ್ನು 'ಸ್ವಪ್ನಾವಸ್ಥೆ' ಎಂಬ ನಮ್ಮ ಮುಂದಿನ ಪುಸ್ತಕದಲ್ಲಿ ವಿವೇಚಿಸಲಾಗುವದು). ಸ್ವಪ್ನಸ್ಖಲನವು ಸ್ವೋದ್ರೇಕದ ವರ್ಗದಲ್ಲಿ ಸೇರುವದಿಲ್ಲ. ಏಕೆಂದರೆ ಸ್ವಪ್ನಾವಸ್ಥೆಯನ್ನು ಅನುಭವಿಸುವವರು ಬೇಕೆಂತಲೆ ಅದನ್ನು ಪ್ರೇರಿಸಿಕೊಂಡಿರುವದಿಲ್ಲ. ಅಲ್ಲದೆ ಕೆಲವರು ಅದರಿಂದ ಹೇಸಿಕೊಂಡು ಅದನ್ನು ನಿಲ್ಲಿಸಿಕೊಳ್ಳಲು ಎಷ್ಟು ಯತ್ನಿಸಿದರೂ ಸಾಧಿಸದಿದ್ದ ಉದಾಹರಣೆಗಳಿವೆ. ಆದರೆ ಮಾನಸಿಕ ಸ್ವರತಿಯ ವರ್ಗದಲ್ಲಿ ಸೇರಿದ ಮೇಲಿನ ನಿಶಾಸ್ವಪ್ನವು ಸ್ವಪ್ರಯತ್ನದಿಂದ ಪ್ರೇರಿಸಿಕೊಂಡ ಅವಸ್ಥೆಯಾಗಿದೆ. ಮಲಗುವ ಮುಂಚೆ ದಿವಾಸ್ವಪ್ನದಂತಹ ಕಲ್ಪನೆಗಳನ್ನು ಚಿಂತಿಸಿಕೊಂಡರೆ ಮುಂದೆ ಅರ್ಧನಿದ್ರೆ ಹತ್ತಿದಾಗ ಅವೆ ಸಂಗತಿಗಳ ಕನಸುಬಿದ್ದು ಇಂದ್ರಿಯಗಳು ಉದ್ದೀಪಿತವಾಗಿ ಸ್ಖಲನ ದ್ರಾವಣಗಳಾಗುವವು. ಬೇಕಾದಂತಹ ಕಾಮುಕ ನಿಶಾಸ್ವಪ್ನಗಳನ್ನು ಮೇಲ್ಕಂಡ ರೀತಿಯಲ್ಲಿ ಪ್ರಯತ್ನಪೂರ್ವಕ ಪ್ರೇರಿಸಿಕೊಳ್ಳಬಹುದೆಂದು ಒಬ್ಬ ಡಾಕ್ಟರನು ಹೇಳಿದ್ದಾನೆ

## ೬. ಪರಸ್ಪರ ಉದ್ರೇಕ

ಹಿಂದೆ ಹೇಳಿದ ಸ್ವರತಿಯ ವೈವಿಧ್ಯಗಳಲ್ಲದೆ ಆಧುನಿಕ ಕಾಮಜ್ಞಾನದ ಗ್ರಂಥಗಳಲ್ಲಿ ಇನ್ನೊಂದು ವಿಧದ ಉದ್ರೇಕವನ್ನು ವರ್ಣಿಸಿದ್ದಾರೆ. ಅದಕ್ಕೆ ಉಭಯ ಹಸ್ತಪ್ರಯೋಗ (Mutual masturbation) ಎಂದು ಹೆಸರು ಅದನ್ನು ಸ್ವರತಿಯ ವರ್ಗದಲ್ಲಿ ಸೇರಿಸುವುದೆ ತಪ್ಪೆಂಬುದು ಮುಂದಿನ ವರ್ಣನೆ ಯಿಂದ ವಾಚಕರಿಗೂ ತಿಳಿಯದಿರದು. ಸ್ವರತಿಯಲ್ಲಿ ಪ್ರತಿಲಿಂಗಿ ವ್ಯಕ್ತಿಯ ಅಭಾವವಿರುತ್ತದೆ. ಅಲ್ಲದೆ ಮಾನಸಶಾಸ್ತ್ರದ ದೃಷ್ಟಿಯಿಂದ ಸ್ವರತರು ಪ್ರತಿ ಲಿಂಗಿಗಳಲ್ಲಿ ರತರಾಗುವ ಬದಲು ತಮ್ಮಲ್ಲಿಯೆ ರತರಾಗುವ ಪ್ರವೃತ್ತಿಯುಳ್ಳವ ರಾಗುವರೆಂದು ಮುಂದೆ 'ಪರಿಣಾಮ' ಎಂಬ ಪ್ರಕರಣದಲ್ಲಿ ವಿವೇಚಿಸಿದ್ದೇವೆ. ಆದರೆ ಪರಸ್ಪರೋದ್ರೇಕದಲ್ಲಿ ಪ್ರತಿಲಿಂಗಿ ವ್ಯಕ್ತಿಯ ಆವಶ್ಯಕತೆಯಿರುತ್ತದೆ. ಗಂಡಹೆಂಡರಾಗಲಿ ಪ್ರಿಯ ಪ್ರೇಯಸಿಯರಾಗಲಿ ಕೆಲವು ಕಾರಣಗಳ ಮೂಲಕ ಸಂಭೋಗಿಸುವ ಬಯಕೆಯುಳ್ಳವರಾಗಿರುವುದಿಲ್ಲ. ಉದಾಹರಣಾರ್ಥ ಗರ್ಭ ನಿರೋಧಕ್ಕಾಗಿ, ಗುಹ್ಯರೋಗ ತಗಲಬಾರದೆಂದು ಅಥವಾ ಮದುವೆಯ ಪೂರ್ವದ ಹಸ್ತಪ್ರಯೋಗದ ಚಟ ತೀರಿಸುವುದಕ್ಕಾಗಿ ಸ್ತ್ರೀಪುರುಷರು ಸಂಭೋಗದಲ್ಲಿ ತೊಡಗದೆ ಪರಸ್ಪರ ಹಸ್ತಪ್ರಯೋಗವನ್ನು ಮಾಡುವರು. ಇಲ್ಲಿ ಹಸ್ತಪ್ರಯೋಗವಿದ್ದರೂ ಸ್ವರತಿಯಿಲ್ಲ. ಮತ್ತು ಮಿಕ್ಕ ಪ್ರಣಯಲೀಲೆ ಗಳಂತೆ ಪರಸ್ಪರ ಹಸ್ತಪ್ರಯೋಗವೂ ಒಂದು ಪ್ರಣಯಚೇಷ್ಟೆಯಹುದು ಆದ್ದರಿಂದ ಅದರಲ್ಲಿ ಯಾವ ದುಷ್ಪರಿಣಾಮವೂ ಉಂಟಾಗಲಾರದು. ಮತ್ತು ಅದು ವಿಕೃತ ಪ್ರವೃತ್ತಿಯೂ ಅಲ್ಲ, ಸ್ವರತಿಯೂ ಅಲ್ಲ ಎಂದು ಹ್ಯಾವ್‌ಲೊಕ್ ಎಲಿಸ್ ಮುಂತಾದ ವಿಜ್ಞಾನಿಗಳು ಹೇಳಿದ್ದಾರೆ. ಆದರೆ ಮದುವೆಯ ಪೂರ್ವ ದಲ್ಲಿ ಅದು ಅನೀತಿಯ ವರ್ಗದಲ್ಲಿ ಸೇರುವುದೆಂದು ಬೇರೆ ಹೇಳಬೇಕಾಗಿಲ್ಲ.

### ಸಾರಾಂಶ

ಮುಷ್ಟಿಮೈಥುನ ಅಥವಾ ಹಸ್ತಪ್ರಯೋಗದ ಚಟಕ್ಕೆ ಬಲಿಬಿದ್ದವರು ತಮ್ಮನ್ನು ಬಲು ಕೀಳುಜೀವಿಗಳೆಂದು ತಿಳಿದುಕೊಳ್ಳುವರು. ಅವರೆದುರಿನಲ್ಲಿ 'ನಾವೆಂದೂ ಹಸ್ತಪ್ರಯೋಗವನ್ನು ಮಾಡಿಕೊಂಡಿಲ್ಲ'ವೆಂದು ಪ್ರಾಮಾಣಿಕ ವಾಗಿ ಜಂಬ ಕೊಚ್ಚುವ ಸ್ತ್ರೀಪುರುಷರು ಅನೇಕರಿದ್ದಾರೆ. ಹಸ್ತಪ್ರಯೋಗಿಗಳು

ಅವರ ಜೀವನದೊಡನೆ ತಮ್ಮ ಜೀವನವನ್ನು ಹೋಲಿಸಿಕೊಂಡು ತಾವು ಮಹಾ ಪಾಪಿಗಳೆಂದು ಕೊರಗುವುದುಂಟು. ಆದರೆ ನಾವು ಹಸ್ತಪ್ರಯೋಗದ ಗೊಡವೆಗೇ ಹೋಗಿಲ್ಲವೆನ್ನುವವರು ವಸ್ತುಸ್ಥಿತಿಯನ್ನೆ ನುಡಿಯುತ್ತಿದ್ದರೂ ಅವರಲ್ಲಿ ಸ್ವರತಿಯ ಮಿಕ್ಕ ಲಕ್ಷಣಗಳೂ ಇಲ್ಲವೇ? ಎಂದು ಈಗ ಪ್ರಶ್ನಿಸು ವಂತಾಯಿತು. 'ನನಗೆ ಯಾರ ಮೇಲೂ ವೈರತ್ವವಿಲ್ಲ' ಎನ್ನುವವರು ಈವರೆಗೆ ಯಾರನ್ನೂ ಹೊಡೆದಿರಲಿಕ್ಕಿಲ್ಲ; ಆದರೆ ದುಡ್ಡಿನ ಆಸೆಗಾಗಿ ಸುಳ್ಳು ಸಾಕ್ಷಿ ನುಡಿದಿರಬಹುದು. 'ಅಹಿಂಸಾ ಪರಮೋ ಧರ್ಮಃ' ಎಂಬ ವ್ರತವನ್ನಿಟ್ಟು ಕೊಂಡವರು ತಮ್ಮ ಮಡಿ-ಮೈಲಿಗೆಗಳಿಂದ, ಬಹಿಷ್ಕಾರ ಸಂಸ್ಕಾರಗಳಿಂದ ಅನೇಕರನ್ನು ಪೀಡಿಸುತ್ತಿರಬಹುದು. ಹಾಗೆಯೆ ಹಸ್ತಪ್ರಯೋಗವನ್ನು ಕನಸಿನಲ್ಲಿ ಕೂಡ ಮಾಡಿಕೊಳ್ಳದಿದ್ದವರು ತೊಡೆಗಳನ್ನು ತಿಕ್ಕಿಕೊಳ್ಳುತ್ತಿರ ಬಹುದು, ವಿವಿಧ ವಸ್ತುಗಳೊಡನೆ ಇಂದ್ರಿಯ ಘರ್ಷಣವನ್ನು ಪಡೆಯುತ್ತಿರ ಬಹುದು ಅಥವಾ ದಿವಾಸ್ವಪ್ನದಲ್ಲಿ ರತಿಯನ್ನು ಅನುಭೋಗಿಸುತ್ತಿರಬಹುದು. ಸ್ವರತಿಯ ಬೀಜವಿರುವವರೆಗೆ ಆ ವ್ಯಕ್ತಿಗಳ ಜೀವನದಲ್ಲಿ ಅದರ ಒಂದಾದರೂ ಶಾಖೆಯು ಚಾಚಿಕೊಂಡಿರಲೇಬೇಕು.

ಮತ್ತು ಸ್ವರತಿಯು ಜನ್ಮದಾರಭ್ಯ ಬೆಳೆಯುತ್ತಿರುವ ಮನುಷ್ಯನಲ್ಲಿ ಒಂದು ವಿಶಿಷ್ಟ ಅವಧಿಯಲ್ಲಿ ನೈಸರ್ಗಿಕವಾಗಿರುವುದರಿಂದ ಆಗ ಹಸ್ತ ಪ್ರಯೋಗವು ಅಪರಿಹಾರ್ಯವೆ ಆಗಿರುವುದು. ಶೈಶವವು ನೈಸರ್ಗಿಕವಾಗಿ ಸ್ವರತಿಯ ಅವಧಿಯಾದ್ದರಿಂದ ಆಗ ಹಸ್ತಪ್ರಯೋಗವನ್ನು ಒಮ್ಮೆಯೂ ಮಾಡಿಕೊಳ್ಳದ ಕೂಸು ಅಪರೂಪವಾಗಿಯಾದರೂ ಸಿಗುವುದೇ ಎಂಬುದು ಸಂಶಯ. ಆದರೆ ಶೈಶವದಲ್ಲಿ ಮಾಡಿಕೊಂಡ ಹಸ್ತಪ್ರಯೋಗವು ಬಹುತರರಿಗೆ ನೆನಪಿರುವುದೇ ಇಲ್ಲ. ಆದ್ದರಿಂದ ನಾವೆಂದೂ ಹಸ್ತಪ್ರಯೋಗವನ್ನು ಮಾಡಿ ಕೊಂಡಿಲ್ಲ ಎನ್ನುವವರು 'ಮಾಡಿಕೊಂಡುದು ನಮಗೆ ನೆನಪಿಲ್ಲ' ಎಂದು ಸುಧಾರಿಸಿಕೊಳ್ಳಬೇಕು.

ಹಿಂದೆ ವಿವರಿಸಿದ ಸ್ವರತಿಯ ವಿವಿಧ ಲಕ್ಷಣಗಳಲ್ಲದೆ ಸ್ತ್ರೀಪುರುಷರ ಬುದ್ಧಿ, ಸಂಸ್ಕಾರ, ಪರಿಸ್ಥಿತಿಗಳಿಗನುಸರಿಸಿ ಇನ್ನೂ ನೂರಾರು, ಸಾವಿರಾರು ಸ್ವರತಿಯ ರೀತಿ, ಲಕ್ಷಣಗಳಾಗಿರಬಹುದು. ಅವೆಲ್ಲವುಗಳಲ್ಲೂ ಅವರು ಸ್ವ-ರತರಾಗಿರುವರೊ ಹೇಗೆಂಬುದನ್ನಷ್ಟೆ ನೋಡಬೇಕಾದುದು. ನೈಸರ್ಗಿಕ

ವಾಗಿ ಬೆಳೆದ ಸ್ತ್ರೀಪುರುಷರಲ್ಲಿ ಕೌಮಾರಾವಸ್ಥೆಯಲ್ಲಿಯೆ ಪ್ರತಿರತಿಯು (ಗಂಡಿಗೆ ಹೆಣ್ಣಿನಲ್ಲಿ ಮತ್ತು ಹೆಣ್ಣಿಗೆ ಗಂಡಿನಲ್ಲಿ ಪ್ರೀತಿ) ಚಿಗುರಿ ಬಲಗೊಳ್ಳಬೇಕು. ಅದು ಕಾಮದ ಕುಸುಮಗಳನ್ನು ಹೊಂದಿ ಪ್ರೇಮದ ವೃಕ್ಷವಾಗಿ ಬೆಳೆಯಬೇಕು. ಕಾಮವು ಪ್ರತಿಲಿಂಗಿಗಳಲ್ಲಿ ತನ್ನ ತೃಪ್ತಿಯನ್ನು ಪಡೆಯಲು ತರುಣ ತರುಣಿಯರನ್ನು ದೂಡುತ್ತದೆ. ಕಾಮವಿಕಾರವಾದಾಗ ತರುಣನಾಗಲಿ ತರುಣಿಯಾಗಲಿ ಪ್ರತಿಲಿಂಗಿಗಳ ಕಡೆಗೆ ಲಕ್ಷ್ಯವನ್ನು ಬೀರುವುದು ಸಹಜವಾಗಿದೆ. ಆದರೆ ಕಾಮಪೀಡೆಯಾದಾಗ ಸ್ತ್ರೀಪುರುಷರು ಅದರ ಶಾಂತಿಗಾಗಿ ತಮ್ಮ ದೇಹ-ಮನಸ್ಸುಗಳನ್ನೆ ಆಶ್ರಯಿಸಿದರೆ ಅವರು ಸ್ವ-ರತರಾದಂತಾಯಿತು. ಕಾಮಶಾಂತಿಗಾಗಿ ಅವರು ಹಸ್ತಪ್ರಯೋಗವನ್ನಾದರೂ ಮಾಡಿಕೊಳ್ಳಲಿ ಇಲ್ಲವೆ ಇನ್ನಾವುದಾದರೂ ಸ್ವೋದ್ರೇಕಕರ ಅಂಗಚಾಲನ ಘರ್ಷಣಗಳನ್ನು ಮಾಡಿಕೊಳ್ಳಲಿ; ಅವರು ಸ್ವ-ರತರೆ ಸೈ.

ಆದ್ದರಿಂದ ಮುಷ್ಟಿಮೈಥುನದ ವಿಷಯಕ್ಕೆ ಮಾತನಾಡುವವರು—ಸಮರ್ಥಿಸುವವರಾಗಲಿ ವಿರೋಧಿಸುವವರಾಗಲಿ—ಅದರ ಮೂಲವಾದ ಸ್ವ-ರತಿಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಮುಷ್ಟಿಮೈಥುನವು ದುರಭ್ಯಾಸವಾಗಿದ್ದರೆ ಅದರ ಮೂಲವಾದ ಸ್ವರತಿಯೂ ದುರ್ವೃತ್ತಿಯಾಗಬೇಕಾಯಿತು. ಆದ್ದರಿಂದ ಮುಷ್ಟಿಮೈಥುನವನ್ನು ನಿಲ್ಲಿಸಲು ಯತ್ನಿಸುವವರು ಸ್ವ-ರತಿಯನ್ನೆ ನಿರ್ಮೂಲಗೊಳಿಸಿ 'ಮೂಲೀ ಕುಠಾರ' ಮಾಡಬೇಕು. ಆದರೆ ಸ್ವರತಿಯು ಒಂದು ದುರ್ವೃತ್ತಿಯೋ? ತತ್ಪರಿಣಾಮವಾದ ಮುಷ್ಟಿಮೈಥುನ, ಹಸ್ತಪ್ರಯೋಗ, ಸ್ವೋದ್ರೇಕಗಳು ದುರಭ್ಯಾಸಗಳೋ? ಆ ದುರ್ವೃತ್ತಿ, ದುರಭ್ಯಾಸಗಳು ನೂರಾರು ಶತಮಾನಗಳಿಂದ ವಿಶ್ವವ್ಯಾಪಿಯಾಗಲು ಕಾರಣವೇನು? ಅಥವಾ ಮನುಷ್ಯಜೀವನದಲ್ಲಿ ಸ್ವರತಿಯು ಒಂದು ಅನಿವಾರ್ಯವಾದ ದುರ್ವೃತ್ತಿಯೋ? ಎಂಬ ಪ್ರಶ್ನೆಗಳನ್ನು ವೈಜ್ಞಾನಿಕವಾಗಿ ಉತ್ತರಿಸಬೇಕು.



# ಆರನೆಯ ಪ್ರಕರಣ



## ಪರಿಣಾಮ

ಯಾವುದೊಂದು ಮಾತಿನ ವಿಷಯಕ್ಕೆ ತೀರ್ಮಾನವನ್ನು ಕಟ್ಟಬೇಕಾದರೆ ಬುದ್ಧಿಗಿರುವ ಅನೇಕ ಕಾಲ್ತೊಡಕುಗಳನ್ನು ಮೊದಲು ಬಿಡಿಸಿಕೊಳ್ಳಬೇಕು. ಜೀವನಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಪ್ರತಿಯೊಬ್ಬ ಪ್ರೌಢ ಮನುಷ್ಯನಿಗೂ ಕೊಂಚವಾದರೂ ಜ್ಞಾನವಿರುತ್ತದೆ. ಆದರೆ ತೊಡಕನ್ನು ಬಿಡಿಸುವಾಗ ಅನುಭವಜನ್ಯ ಜ್ಞಾನಕ್ಕಿಂತ ಅಜ್ಜನ ಮಾತಿಗೇ ಹೆಚ್ಚು ಬೆಲೆಯನ್ನು ಕೊಡುವುದು ರೂಢಿಯಾಗಿಬಿಟ್ಟಿದೆ. ಸ್ವಲ್ಪ ವಿಮರ್ಶಿಸಿ ನೋಡಿದರೂ ಅಸಂಬದ್ಧವೆನಿಸಬಹುದಾದ ಮಾತು ಕೂಡ ಅಜ್ಜನ ಮಾತೆಂಬ ಒಂದೇ ಕಾರಣದಿಂದ ಆದರಿಸಲ್ಪಡುತ್ತದೆ. ಮತ್ತು ಅಜ್ಜನ ಮಾತುಗಳನ್ನು ಸಮರ್ಥಿಸುವ ಭರದಲ್ಲಿ ಸುಳ್ಳು ಕತೆಗಳನ್ನೂ ಎಂದೂ ಸಂಭವಿಸಿರದ ತಮ್ಮ ಅನುಭವಗಳನ್ನೂ ಉದಾಹರಿಸುವುದು ತಪ್ಪಲ್ಲ ಎಂಬುದು 'ಸತ್ಯಂ ವದ' ಎಂದು ನುಡಿಯುವವರ ಅಭಿಪ್ರಾಯವಾಗಿರುತ್ತದೆ ಸತ್ಯವೆಂದರೆ ಅಜ್ಜ ಹೇಳಿದ್ದು ಅಥವಾ ತಾವು ಹೇಳಿದ್ದು ಎಂದು ಅವರ ವ್ಯಾಖ್ಯೆಯಿರುವಂತೆ ತೋರುತ್ತದೆ.

ಆದರೆ ಹೀಗೆ ಪಾರಂಪರಿಕತೆಯ ಬೇಡಿಗಳಿಂದ ಬಂಧಿಸಲ್ಪಟ್ಟ ಬುದ್ಧಿಯು ಸಮಂಜಸವಾದ ಸಿದ್ಧಾಂತಕ್ಕೆ ಎಂದೂ ಮುಟ್ಟದು. ಪ್ರಾಮಾಣಿಕವಾದ ಬುದ್ಧಿಯಲ್ಲಿ ಸಮಂಜಸವಾದ ವಿಚಾರಗಳು ಎಷ್ಟೋ ಸಲ ಮಿಂಚಿಹೋಗುತ್ತವೆ. ಆದರೆ ಪರಂಪರಾಭಕ್ತಿಯ ಮೋಡಗಳು ಆ ಮಿಂಚನ್ನು ನುಂಗುತ್ತಿರುತ್ತವೆ. ಹಿಂದಿನವರ ಅಭಿಪ್ರಾಯದ ಮುಸುಕು ಹಾಕಿ ಪಾರಂಪರಿಕರು ತಮ್ಮ ಅಭಿಪ್ರಾಯವನ್ನೇ ಸಮರ್ಥಿಸುವುದೂ ಉಂಟು ಏಕೆಂದರೆ ಕೆಲವು ಸಲ

ಹಿಂದಿನವರ ಮಾತಿಗೆ ಅನೇಕಾರ್ಥಗಳಿರುತ್ತವೆ. ಅವುಗಳಲ್ಲಿ ತಮಗೆ ಸುಲಭವೆನಿಸುವ ಅಥವಾ ತಮ್ಮ ಹೋಳಿಗೆಯನ್ನು ತುಪ್ಪದಲ್ಲಿ ಕೆಡುಹಲು ಸಾಧಕವಾದ ಅರ್ಥವನ್ನೇ ಅವರು ಸಮರ್ಥಿಸುವರು. ಹೀಗೆ ಬುದ್ಧಿಯನ್ನು ಮಾರಿ, ದೇಶಕಾಲಗಳಿಗೆ ಸಂಬಂಧಿಸದ, ವಿಜ್ಞಾನದೃಷ್ಟಿಗೆ ಸಂಗತವೆನಿಸದ ಸಿದ್ಧಾಂತಗಳಿಂದ ಯಾರಿಗೆ ಸುಖ ಸಿಕ್ಕೀತು? ಮಿತಿಮೀರಿದ ಆಹಾರ, ಅಸ್ವಾಸ್ಥ್ಯನಿವಾಸ, ಅಸ್ವಚ್ಛ ವಸ್ತ್ರಾಭರಣಗಳಿಂದ ರೋಗಗಳು ಬರುವವೆಂದು ಮನಗಂಡ ಸುಶಿಕ್ಷಿತರು ಸಹ, ಮಕ್ಕಳಿಗೆ ಕೆಮ್ಮು, ಉಬ್ಬಸ, ಬಾಲಗ್ರಹಗಳು ಕಾಡುತ್ತಿರುವಾಗ ಕಾರಣಗಳನ್ನು ನಿವಾರಿಸಲೆತ್ನಿಸದೆ ತಾಯಿತ, ಮಂತ್ರ, ತಂತ್ರಗಳಿಂದಲೆ ಪ್ರಾಣಹಾನಿಗೆ ಎಡೆಗೊಡುತ್ತಾರೆಂದ ಮೇಲೆ ರೂಢಿ-ಮೂಢತೆಯಲ್ಲಿ ಸುಖವನ್ನರಸುವುದು ಎಂಥ ತಿಳಿಗೇಡಿತನ? ಸ್ವಪ್ನಸ್ಖಲನದಿಂದ ಕ್ರಮೇಣ ಷಂಢತ್ವವು ಒದಗುವುದೆಂದು ಅಂಜಿಸಲ್ಪಟ್ಟ ಒಬ್ಬ ತರುಣನು ಅದನ್ನು ನಿಲ್ಲಿಸುವುದಕ್ಕಾಗಿ ವಿಭೂತಿ, ತಾಯಿತ ಮತ್ತು ಆಕರ್ಷಕ ವಿದ್ಯುತ್ತುಗಳಿಗಾಗಿ ನೂರಾರು ರೂಪಾಯಿ ವೆಚ್ಚಿಸಿ ನಿರಾಶೆಹೊಂದಿ ಈಗ ಎರಡು ತಿಂಗಳುಗಳಿಂದ ನಿದ್ರಾನಾಶ ಹಾಗೂ ಸ್ವಪ್ನಸ್ಖಲನಗಳ ಪೀಡೆಯು ಮಿತಿಮೀರಿ ಬೆಳೆದು ನಮ್ಮ ಸಲಹೆಗಾಗಿ ಪತ್ರ ಬರೆದಿದ್ದಾನೆ

**ಸಿದ್ಧಾಂತಗಳು ತೂಕವುಳ್ಳ ಬುದ್ಧಿಯಿಂದ ಸ್ಫುರಿಸಬೇಕು.** ಬುದ್ಧಿಯು ತೂಕವನ್ನಿಟ್ಟುಕೊಳ್ಳಲು ಸಮರ್ಥವಾಗಬೇಕಾದರೆ ಅದನ್ನು ಅತ್ತಿತ್ತ ಎಳೆದಾಡುವ ರೂಢಿ-ಮೂಢ ಕಲ್ಪನೆಯ ಸರಪಳಿಗಳು ಜಾರಿ ಬೀಳಬೇಕು. ರೂಢಿ-ಮೂಢತೆಯ ಕ್ರೂರ ದವಡೆಗಳಲ್ಲಿ ಲಕ್ಷಾವಧಿ ಮಕ್ಕಳೂ ತರುಣ ತರುಣಿಯರೂ ಜೀವನಕ್ಕೆ ಎರವಾಗುತ್ತಿದ್ದಾರೆ. ಕಾಮಿಣಿಯಾದರೆ ಕೇರು ಒಡೆದು ಕೊಲ್ಲುತ್ತಾರೆ; ಬಾಲಗ್ರಹವಾದರೆ ಬರೆಕೊಟ್ಟು ಕೊಲ್ಲುತ್ತಾರೆ; ಮೈಲಿ ಗೊಬ್ಬರಗಳಾದರೆ ದೊಡ್ಡಮ್ಮ ಚಿಕ್ಕಮ್ಮಗಳಿಗೆ ಕುರಿ-ಕೋಳಿ ಕಡಿದು ಮಕ್ಕಳ ಹರಣ ಹಿಚಕುತ್ತಾರೆ. ಗ್ರಹ ನಕ್ಷತ್ರಗಳ ಕಟ್ಟೆಯ ಮೇಲೆ ವಿಷಮ ತರುಣತರುಣಿಯರನ್ನು ವಿವಾಹದ ಹೆಸರಿನಲ್ಲಿ ಬಲಿಗೊಡುತ್ತಾರೆ. ಪರಲೋಕಕ್ಕೆ ತೆರಳಿದ ಗಂಡನಲ್ಲಿ ಭಕ್ತಿಯಿಡಲು ಬಲಾತ್ಕರಿಸಿ ಪವಿತ್ರ ಹೆಂಗಳೆಯರನ್ನು ಗುಪ್ತ ವೇಶ್ಯಾವ್ಯವಸಾಯಕ್ಕೆ ತಳ್ಳುತ್ತಾರೆ. ಮತ್ತೆ ಅದೇ ರೂಢಿ ಮೂಢತೆಯ ಸಿದ್ಧಾಂತಗಳಿಂದ ಹಸ್ತಪ್ರಯೋಗಿಗಳಾದ ಅಸಂಖ್ಯ ತರುಣ

ತರುಣಿಯರ ಬಾಳೂ ಹುರುಪಳಿಸಿ ಹೋಗುತ್ತಿದೆ. ಆದ್ದರಿಂದ ಹಸ್ತಪ್ರಯೋಗ ಒಂದೇ, ಅಲ್ಲ ಸ್ವರತಿಯ ಸಮಸ್ತ ಪ್ರವೃತ್ತಿಗಳನ್ನು ವಿಜ್ಞಾನದ ಪ್ರಕಾಶದಲ್ಲಿ ಪರೀಕ್ಷಿಸಬೇಕು ಅದಕ್ಕೆ ಸಹಾಯಕವಾಗಿ ಬೇಕಾದರೆ, (೧) ಐತಿಹಾಸಿಕ (೨) ಜನಾಂಗಶಾಸ್ತ್ರ (೩) ಧಾರ್ಮಿಕ (೪) ಪಾರಂಪರಿಕ ದೃಷ್ಟಿಗಳಿಂದ ಪರೀಕ್ಷಿಸಿ ಕೊನೆಗೆ (೫) ವೈಜ್ಞಾನಿಕ ಒರೆಗಲ್ಲಿಗೆ ತಿಕ್ಕಿನೋಡಬಹುದು.

## ಐತಿಹಾಸಿಕ ದೃಷ್ಟಿ

ಇತಿಹಾಸವು ಮಾನವ ಸಮಾಜದ ಆಗುಹೋಗುಗಳ ಕೈಗನ್ನಡಿ. ನಿಷ್ಪಕ್ಷಪಾತ ಬುದ್ಧಿಗೆ ಇತಿಹಾಸದಲ್ಲಿ ಪ್ರಾಚೀನ ಸಮಾಜಗಳಲ್ಲಿಯ ಗಹನ ಗುಹ್ಯಸಂಗತಿಗಳೆಲ್ಲವೂ ವ್ಯಕ್ತವಾಗುವವು. ಪ್ರಾಚೀನರನ್ನು ಅದರಲ್ಲಿಯೂ ಸ್ವದೇಶದ ಪೂರ್ವಜರನ್ನು ಹೊಗಳುವ ಉದ್ದೇಶದಿಂದಲೆ ಇತಿಹಾಸವನ್ನು ಶೋಧಿಸುವವರ ಕಣ್ಣಿಗೆ ಅನೇಕ ಸಂಗತಿಗಳು ಗೋಚರಿಸದಿರಬಹುದು. ಪ್ರಾಚೀನರು ಕೂಡ ಮನುಷ್ಯರೆ ಆಗಿದ್ದರು. ನಾವು ಅವರ ವಂಶಜರು. ಆದ್ದರಿಂದ ನಮ್ಮಲ್ಲಿ ತೋರುವ ಶಾರೀರಿಕ ಮಾನಸಿಕ ಭಾವ ಸ್ವಭಾವಗಳ ಬೀಜಗಳು ಅವರಲ್ಲಿ ಇದ್ದಿರಲೇಬೇಕೆಂಬುದು ಸಹಜ. ಆಧುನಿಕರಲ್ಲಿ ಮುಷ್ಟಿ ಮೈಥುನವು ವ್ಯಾಪಕವಾಗಿದೆ ಎಂಬುವನ್ನು ಒಪ್ಪುವವರಿಗೆ ಪ್ರಾಚೀನರಲ್ಲಿಯೂ ಅದು ತುಸು ಹೆಚ್ಚುಕಡಿಮೆ ಪ್ರಮಾಣದಲ್ಲಿ ಇದ್ದಿರಲೇಬೇಕೆಂದು ಊಹಿಸುವುದು ಕಷ್ಟವೆನಿಸಬಾರದು.

ಆದರೆ ಊಹೆಯ ಆವಶ್ಯಕತೆಯೂ ಇಲ್ಲ ಏಕೆಂದರೆ ಮುಷ್ಟಿಮೈಥುನವು ಮಾನವ ಸಮಾಜದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಪ್ರಚಲಿತವಾಗಿತ್ತೆಂದು ಈಗ ಉಪಲಬ್ಧವಾದ ವಿವಿಧ ಜನಾಂಗಗಳ ಪೂರ್ವೇತಿಹಾಸದಿಂದ ಮತ್ತು ಪ್ರಾಚೀನ ಸಾಹಿತ್ಯಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ ಮತ್ತೆ ಮಹಾ ಧಾರ್ಮಿಕರು ಕೂಡ ಆ ಚಟಕ್ಕೆ ಒಳಗಾಗಿದ್ದರೆಂದೂ ವ್ಯಕ್ತವಾಗುತ್ತದೆ. ಉದಾಹರಣಾರ್ಥ ಇಂಗ್ರೇಜಿಯಲ್ಲಿ ಮುಷ್ಟಿಮೈಥುನಕ್ಕೆ 'ಓನಸಿಜಂ' ಎನ್ನುತ್ತಾರೆ ಬೈಬಲಿನಲ್ಲಿಯ ಓನನ್ ಎಂಬ ಪುರುಷನ ಜೀವನವೇ ಆ ಶಬ್ದದ ಉತ್ಪತ್ತಿಗೆ ಕಾರಣವೆಂದು ಬಲ್ಲವರು ಹೇಳುತ್ತಾರೆ. ಓನನನು ತಂದೆಯಾದ ಜೂಡನ ಅಪ್ಪಣೆಯ ಮೇರೆಗೆ ತನ್ನ ವಿಧವೆಯಾದ ಅತ್ತಿಗೆಯನ್ನು ಮದುವೆ

ಯಾದ. ಆದರೆ ಅವನ ಮನಸ್ಸಿನಲ್ಲಿ ಏನಿತ್ತೋ ! ಅವನು ಸಂಭೋಗ ಕಾಲ ದಲ್ಲಿ ವೀರ್ಯವನ್ನು ಭೂಮಿಯ ಮೇಲೆ ಸ್ಖಲಿಸಿಕೊಳ್ಳುತ್ತಿದ್ದನಂತೆ ಅಣ್ಣನ ಹೆಂಡತಿಯೆಂಬ ಧಾರ್ಮಿಕ ಭಾವನೆಯು ಅವನ ಮಾನಸಿಕ ಪ್ರೇಮಕ್ಕೆ ತಡೆ ಯಾಗಿರಬಹುದು ಆದ್ದರಿಂದ ಸಂಭೋಗವನ್ನಾಚರಿಸದೆ ಬರಿ ಬಾಹ್ಯಘರ್ಷಣ ಗಳಿಂದ ವೀರ್ಯವನ್ನು ಸ್ಖಲಿಸುವ ಚಟವನ್ನಿಟ್ಟುಕೊಂಡಿರಬಹುದು. ಓನನನು ಬಾಹ್ಯಘರ್ಷಣಗಳಿಂದ ವೀರ್ಯವನ್ನು ಭೂಮಿಯ ಮೇಲೆ ಕೆಡಹಿಕೊಂಡುದ ರಿಂದ ಯೋನಿಬಾಹ್ಯ ವೀರ್ಯಸ್ಖಲನದ ರೀತಿಗಳನ್ನೆಲ್ಲ 'ಓನನಿಜಂ' ಎನ್ನ ಲಾರಂಭಿಸಿದರು

ಗ್ರೀಕ ಸಾಮ್ರಾಜ್ಯಕಾಲದಲ್ಲಿ ಅನೇಕ ವಿಧದ ಹಸ್ತಪ್ರಯೋಗಗಳು ಪ್ರಚಲಿತವಾಗಿದ್ದುವು. ಆ ಚಟಗಳ ವಿಷಯಕ್ಕೆ ಆಗ ಈಗಿನಂತೆ ವಿಶೇಷ ತಿರಸ್ಕಾರವಿರಲಿಲ್ಲ. ಅದೊಂದು ಪಾಪವೆಂಬ ಕಲ್ಪನೆಯಂತೂ ಇರಲೇ ಇಲ್ಲ ಆದರೆ ಹಸ್ತಪ್ರಯೋಗವು ಕೇವಲ ಹೆಂಗಸರಿಗೆ ಯೋಗ್ಯವಾದುದೆಂದು ಅವರು ತಿಳಿದಿದ್ದರು. ಗಂಡಸು ಮುಷ್ಟಿಮೈಥುನವನ್ನು ಮಾಡಿಕೊಂಡರೆ ಅವನಲ್ಲಿ ಸ್ತ್ರೀಯರನ್ನು ಆಕರ್ಷಿಸಿ ಸಂಭೋಗಿಸುವ ಕೌಶಲ್ಯವಿಲ್ಲೆಂದು ತಿಳಿಯುತ್ತಿದ್ದರು ಗಂಡಸರನ್ನು ಕೂಡ ಅವನು ಆಕರ್ಷಿಸಲಾರನೆಂದು ಅವರು ಹೀಯಾಳಿಸು ತ್ತಿದ್ದರು (ಏಕೆಂದರೆ ಗ್ರೀಸದಲ್ಲಿ ಸಮರತಿಯೂ ಪ್ರಚಾರದಲ್ಲಿತ್ತು ) ಆದ್ದರಿಂದ ಗಂಡಸರಿಗೂ ಹೆಂಗಸರಿಗೂ ಆಕರ್ಷಕನಲ್ಲದ ಪುರುಷರಷ್ಟೆ ಮುಷ್ಟಿಮೈಥುನ ವನ್ನು ಮಾಡಿಕೊಳ್ಳುವರೆಂದು ಅವರ ಭಾವನೆಯಾಗಿತ್ತು. ಆದರೆ ಅದರಿಂದ ದುಷ್ಪರಿಣಾಮಗಳಾಗುವವೆಂಬ ಭಾವನೆಯು ಅವರಿಗಿರಲಿಲ್ಲ. ಆಗಿನ ಅರಿಸ್ಟೊ ಫೇನ್ಸ್ ಎಂಬ ನ್ಯಾಯವಾದಿಯ ಅಭಿಪ್ರಾಯದಂತೆ ಹಸ್ತಪ್ರಯೋಗವು ಕೇವಲ ಹೆಂಗಸರು, ಮಕ್ಕಳು, ಗುಲಾಮರು ಮತ್ತು ಮುದುಕರಿಗೆ ಯೋಗ್ಯವಾದು ದಾಗಿತ್ತು.

ಅದೆ ಸಮಯದ 'ಸಿನಿಕ್ ಸ್ಕೂಲ್' ಎಂಬ ಸಂಗಡದ ತತ್ವಜ್ಞಾನಿಗಳು ಹಸ್ತಪ್ರಯೋಗವು ಪರರನ್ನವಲಂಬಿಸದೆ ಸ್ವತಂತ್ರವಾಗಿ ಸ್ವಾನಂದವನ್ನು ಹೊಂದುವ ಮಾರ್ಗವೆಂದು ಜಂಬ ಕೊಚ್ಚುತ್ತಿದ್ದರೆಂದು ಎನ್‌ಸೈಕ್ಲೊಪೀಡಿಯ ಹೇಳುತ್ತದೆ. ಅದರಿಂದ ಅವರಲ್ಲಿಯೂ ಅದು ರೂಢವಾಗಿತ್ತೆಂದು ವ್ಯಕ್ತವಾಗು ತದೆ. ಅದೇ ಕಾಲಕ್ಕೆ ಆಗಿನ

ಸಾರ್ವಜನಿಕ ಬೀದಿಗಳಲ್ಲಿ ಮುಷ್ಟಿಮೈಥುನ ಮಾಡಿಕೊಳ್ಳುತ್ತಿದ್ದನೆಂಬ ಕಥೆಯು ಪ್ರಸಿದ್ಧವಾಗಿದೆ. ಗ್ರೀಕರ ನಂತರ ರೋಮ ಸಾಮ್ರಾಜ್ಯಕಾಲದಲ್ಲಿಯೂ ಹಸ್ತಪ್ರಯೋಗದ ವಿಷಯಕ್ಕೆ ಅದೆ ಭಾವನೆಯಿತ್ತು ಆದರೆ ಗ್ರೀಕರಿಗಿಂತ ರೋಮನರಲ್ಲಿ ಹಸ್ತಪ್ರಯೋಗವು ಬಹಳ ಹೆಚ್ಚಾಗಿತ್ತೆಂದು ಇತಿಹಾಸದಿಂದ ತಿಳಿಯುತ್ತದೆ. ನಂತರ ಕ್ರಿಶ್ಚಿಯನ್ ಧರ್ಮವು ಉದಯವಾಯಿತು. ಆ ನಂತರ ಸುಮಾರು ಒಂದು ಸಾವಿರ ವರ್ಷದವರೆಗೂ ಹಸ್ತಪ್ರಯೋಗದ ವಿರುದ್ಧವಾಗಿ ಆ ಧರ್ಮವು ಮಾತನ್ನೆತ್ತಲಿಲ್ಲ. ಏಕೆಂದರೆ ಕ್ರಿಶ್ಚಿಯನ್ ಚರ್ಚ ಗಳಲ್ಲಿಯೆ ಅನೇಕ ವಿಧದ ಕಾಮಜೀವನದ ದುಷ್ಕೃತ್ಯಗಳು ಆಗ ನಡೆಯು ತ್ತಿದ್ದವು ೧೬ನೆಯ ಶತಮಾನವು ಪಾಶ್ಚಾತ್ಯ ದೇಶಗಳಲ್ಲಿ ಪುನರುಜ್ಜೀವನ ಯುಗ (Reformation) ಎನಿಸುವದು. ಅಲ್ಲಿಂದ ಮುಂದೆ ಕ್ರಿಶ್ಚಿಯನರು ಹಸ್ತಪ್ರಯೋಗದ ವಿರುದ್ಧವಾಗಿ ಮಾತನಾಡಹತ್ತಿದರು. ಮಿಕ್ಕ ಕಾಮಲೀಲೆ ಗಳಂತೆ ಹಸ್ತಪ್ರಯೋಗವೂ ಪಾಪವೆಂದು ಗಣಿಸಲ್ಪಟ್ಟಿತು.

ಭಾರತದ ಕಾಮಶಾಸ್ತ್ರಗಳಲ್ಲಿ ಅಥವಾ ಆಯುರ್ವೇದ ಗ್ರಂಥಗಳಲ್ಲಿ ಹಸ್ತಪ್ರಯೋಗದ ವಿಷಯವು ಒಂದುದು ನಮಗೆಲ್ಲಿಯೂ ಕಂಡಿಲ್ಲ. ಅತಿ ಕಾಮಸಂಗಗಳಿಂದ, ರೋಗಿಸಂಗಗಳಿಂದ ಉಂಟಾಗುವ ಕಾಮಾಂಗಗಳ ಅಶಕ್ತಿ, ವ್ಯಾಧಿಗಳ ವರ್ಣನೆ ಚಿಕಿತ್ಸೆಗಳು ಬೇಕಾದಷ್ಟು ಬಂದಿವೆ. ಆದರೆ ಹಸ್ತ ಪ್ರಯೋಗದ ವಿಷಯವಾಗಿ ಅಥವಾ ಅದರ ಅತಿರೇಕದ ದುಷ್ಪರಿಣಾಮ ಉಪ ಚಾರಗಳ ವಿಷಯದಲ್ಲಿ ಸ್ಪಷ್ಟವಾಗಿ ಎಲ್ಲಿಯೂ ಉಲ್ಲೇಖವಿಲ್ಲ. ಅದರಿಂದ ಪ್ರಾಚೀನ ಭಾರತದಲ್ಲಿ ಹಸ್ತಪ್ರಯೋಗದ ರೂಢಿಯೆ ಇರಲಿಲ್ಲವೆಂದು ಸಿದ್ಧಾಂತಿ ಸುವದು ತಪ್ಪಾಗುವದು. ಆದರೆ ಹಸ್ತಪ್ರಯೋಗವು ನಿರಪಾಯಕಾರಿ ಅಥವಾ ನೈಸರ್ಗಿಕವೆಂದು ಅವರ ಅಭಿಪ್ರಾಯವಿರಲು ಸಾಕು ಕಾಮಜೀವನದ ಯಾವ ಅಂಶಗಳ ವಿಷಯಕ್ಕೂ ಪ್ರಾಚೀನ ಭಾರತೀಯರಲ್ಲಿ ತಿರಸ್ಕಾರವಿರಲಿಲ್ಲ. ಮತ್ತು ಈಗಿನಕಿಂತ ಆಗ ಕಾಮಸಿದ್ಧಿಗೆ ಹೆಚ್ಚು ಅನುಕೂಲತೆಗಳಿದ್ದವು; ಸಮಾಜವೂ ವಿವಿಧ ಕಾಮಸಾಧನಗಳಿಗೆ ತನ್ನ ಒಪ್ಪಿಗೆಯನ್ನು ಕೊಡುತಿ ತ್ತೆಂದು ಆಗಿನ ಕಾಮಶಾಸ್ತ್ರದ ಗ್ರಂಥಗಳನ್ನು ನೋಡಿದರೆ ತಿಳಿಯುವುದು. ವಾತ್ಸ್ಯಾಯನ ಋಷಿಗಳು ವೇಶ್ಯಾಸಂಗ, ಕುಮಾರೀಸಂಗ, ವಿಧವಾಸಂಗ, ಗಂಡನಿಂದ ಅತೃಪ್ತಳಾದ ತರುಣಿಯ ಆಕರ್ಷಣ ಸಂಗಗಳ ಕ್ರಮಗಳನ್ನು

ತಮ್ಮ ಕಾಮಸೂತ್ರಗಳಲ್ಲಿ ವರ್ಣಿಸಿದ್ದಾರೆಂದ ಮೇಲೆ ಆಗಿನ ಸಮಾಜಗಳಲ್ಲಿ ಕಾಮಜೀವನದ ವಿಷಯಕ್ಕಿದ್ದ ಭಾವವನ್ನು ಸಹಜವಾಗಿ ತರ್ಕಿಸಬಹುದು. ಅಷ್ಟು ಕಾಮಸ್ವಾತಂತ್ರ್ಯವಿದ್ದುದರಿಂದಲೆ ಈಗಿನಷ್ಟು ಹಸ್ತಪ್ರಯೋಗವು ಆಗ ಪ್ರಚುರವಾಗಿರಲಿಕ್ಕಿಲ್ಲವೆಂದು ಬೇಕಾದರೆ ತೀರ್ಮಾನಿಸಬಹುದು. ಮತ್ತು ಕಾಮಸ್ವಾತಂತ್ರ್ಯದ ಉಪಂಭೋಗವನ್ನು ಮಾಡಿಕೊಳ್ಳಲಾಗದ ಕೆಲವರಲ್ಲಿ ಹಸ್ತಪ್ರಯೋಗವು ರೂಢವಾಗಿರಲೇಬೇಕು. ಆದರೆ ಅದರ ವಿಷಯಕ್ಕೆ ಸಮಾಜವೂ ಧರ್ಮವೂ ಗ್ರೀಕರಂತೆ ಅಲಕ್ಷ್ಯಭಾವದಿಂದಿದ್ದಿರಬಹುದು.

ಅಲ್ಲದೆ ವಿಶಿಷ್ಟ ಉದ್ದೇಶಗಳ ಮೂಲಕ ಕಾಮಸಂಯಮ ಮಾಡಲು ಯತ್ನಿಸುತ್ತಿದ್ದ ನಿಷ್ಠಾ ಬ್ರಹ್ಮಚಾರಿ ಮತ್ತು ಯೋಗಸಾಧಕರಲ್ಲಿ ಕೂಡ ಹಸ್ತಪ್ರಯೋಗವು ಪ್ರಚಲಿತವಾಗಿತ್ತೆಂದು ಪೌರಾಣಿಕ ಕತೆಗಳಿಂದ ಸುಲಭವಾಗಿ ಊಹಿಸಲಿಕ್ಕೆ ಬರುವಂತಿದೆ. ಉಪನಿಷತ್ಕಾಲದ ಉದ್ದಾಲಕ ಮಹರ್ಷಿಯು ಕಮಲದಲ್ಲಿ ಸ್ಖಲಿಸಿಕೊಂಡ ವೀರ್ಯದಿಂದ ನಾಚಿಕೇತನು ಹುಟ್ಟಿದನು. ಪೌರಾಣಿಕ ಕಾಲದಲ್ಲಿ ದೊನ್ನೆಯಲ್ಲಿಯ ವೀರ್ಯದಿಂದ ದ್ರೋಣಾಚಾರ್ಯರು ಹುಟ್ಟಿದರು. ಬ್ರಹ್ಮಚಾರಿ ಹನುಮಂತನು ಕೂಡ ವೀರ್ಯವನ್ನು ಸ್ಖಲಿಸಿಕೊಂಡಿದ್ದಾನೆ. ಅದನ್ನೊಂದು ಮೀನು ನುಂಗಿ ಗರ್ಭ ಧರಿಸಿತಂತೆ. ಈ ಕತೆಗಳಲ್ಲಿ ಕವಿಕಲ್ಪನೆ ಕೂಡಿರುವುದರಿಂದ ಅವುಗಳೆಲ್ಲ ಹಸ್ತಪ್ರಯೋಗವನ್ನು ಸೂಚಿಸುವ ಕತೆಗಳಾಗಿವೆಯೆಂದು ಖಂಡಿತವಾಗಿ ನಿರ್ಧರಿಸಬಹುದು ಪುರಾಣಗಳಲ್ಲಿ 'ಮಾನಸ' ಪುತ್ರರ ಉಲ್ಲೇಖಗಳು ಅನೇಕ ಕಡೆಗಳಲ್ಲಿ ಸಿಗುತ್ತವೆ. ಅವರೆಲ್ಲ ಎಲ್ಲೆಲ್ಲಿ ಸ್ಖಲಿಸಿದ ವೀರ್ಯದಿಂದ ಹುಟ್ಟಿದವರೋ? ಇತಿಹಾಸ ಕಾಲದಲ್ಲಂತೂ ಬಾಲ್ಯವಿವಾಹಗಳು ವಿಶೇಷವಾಗಿ ರೂಢವಾದುದರಿಂದ ಹುಡುಗ ಹುಡುಗಿಯರು ಬಹು ಬೇಗ ಸಂಭೋಗದ ಅನುಕೂಲತೆಗಳನ್ನು ಹೊಂದುತ್ತಿದ್ದರಾದುದರಿಂದ ಆಗ ಪೌರಾಣಿಕ ಕಾಲದಷ್ಟು ಹಸ್ತಪ್ರಯೋಗವು ಇದ್ದಿರಲಿಕ್ಕಿಲ್ಲವೆಂದು ಹೇಳಬಹುದು ನಂತರ ಹದಿನೇಳನೆಯ ಶತಮಾನದಿಂದ ಕ್ರಿಶ್ಚಿಯನ್ ಧರ್ಮ ಹಾಗೂ ಅದರಿಂದ ಪ್ರಭಾವಿತವಾಗಿದ್ದ ಮಹಮ್ಮದೀಯ ಧರ್ಮವು ಭಾರತದಲ್ಲಿ ಬಂದುವು. ಅಲ್ಲದೆ ಆ ಧರ್ಮದವರು ಕ್ರಮೇಣ ರಾಜ್ಯಸೂತ್ರಗಳನ್ನೂ ಕೈಕೊಂಡರು. ಅದರಿಂದ ಆಯಾ ಧರ್ಮಗಳ ನೆರಳು ಭಾರತೀಯ ಕಾಮಸ್ವಾತಂತ್ರ್ಯದ ಮೇಲೆ ಬಿತ್ತು. ಕಾಮಕ್ಕೆ ಸಂಬಂಧಿಸಿದುದೆಲ್ಲ ಪಾಪ

ವಾಯಿತು. ಕಾಮಜೀವನದ ಮೇಲೆ ಅನೇಕ ಬಂಧನಗಳು ಬಿಗಿಯಲ್ಪಟ್ಟವು. ಬಂಧನಗಳು ಹೆಚ್ಚಿದಂತೆ ಪುನಃ ಹಸ್ತಪ್ರಯೋಗವು ಹೆಚ್ಚಾಗುತ್ತ ಬಂತು ಕಾಮಜೀವನವೆ ನೀಚವೆನಿಸಿದುದರಿಂದ ಹಸ್ತಪ್ರಯೋಗವೂ ಪಾಪವೆನಿಸಿತು.

## ವಿವಿಧ ಜನಾಂಗಗಳಲ್ಲಿ

ಇಡಿ ಜಗತ್ತಿನ ಮನುಷ್ಯ ಜನಾಂಗಗಳನ್ನು ಎರಡು ವರ್ಗಗಳಲ್ಲಿ ವಿಂಗಡಿಸಬಹುದು; ನಾಗರಿಕರು ಮತ್ತು ಅನಾಗರಿಕರು ಎಂದು. ನಾಗರಿಕರು ನಿನದಿನವೂ ಹೊಸಹೊಸ ವೈಜ್ಞಾನಿಕ ಶೋಧಗಳ ಸಹಾಯದಿಂದ ಇಹಸುಖವನ್ನು ಬೆಳೆಸುವ ನವೀನ ಸಂಸ್ಕೃತಿಯವರು ಅನಾಗರಿಕರು ವಿಶೇಷವಾಗಿ ಪರಂಪರೆಯನ್ನೆ ಅವಲಂಬಿಸಿ ಅಸಾಮಾನ್ಯ ಪರಿಸ್ಥಿತಿಯ ಒತ್ತಾಯದಿಂದ ಮಾತ್ರ ಎಂದಾದರೊಮ್ಮೆ ತಮ್ಮ ಜೀವನದ ರೀತಿ-ನೀತಿಗಳಲ್ಲಿ ಬದಲಾವಣೆ ಮಾಡಿಕೊಳ್ಳಬಲ್ಲ ಹಳೆ ಸಂಸ್ಕೃತಿಯವರು. ಆದ್ದರಿಂದ ಸಾಮಾನ್ಯವಾಗಿ ಅನಾಗರಿಕ ಜನಾಂಗಗಳಲ್ಲಿಯ ಜೀವನಕ್ರಮವನ್ನು ತಿಳಿದುಕೊಂಡರೆ ಸಾವಿರಾರು ವರ್ಷಗಳ ಹಿಂದಿನ ಜೀವನಕ್ರಮವು ತಿಳಿಯುತ್ತದೆಂಬ ಅಭಿಪ್ರಾಯವನ್ನು ಅನೇಕರು ಇಟ್ಟುಕೊಂಡುದರಲ್ಲಿ ತಥ್ಯಾಂಶವಿದೆಯೆನ್ನಬಹುದು. ನವೀನ ಸಂಸ್ಕೃತಿಯ ನಾಗರಿಕರಲ್ಲಿ ಹುಟ್ಟು, ಸಾವು, ಮದುವೆ ಮಕ್ಕಳು, ದೇವರು ಧರ್ಮ, ರೋಗ ಭೂತಗಳ ವಿಷಯಕ್ಕೆ ಪ್ರತಿ ಶತಮಾನದಲ್ಲಿಯೂ ವಿಚಾರ ಪಲ್ಲಟವಾಗುತ್ತಿರುವುದು ಕಂಡುಬರುತ್ತದೆ ಅನಾಗರಿಕರಲ್ಲಿ ಆ ವಿಷಯಗಳು ಸಾವಿರಾರು ವರ್ಷಗಳ ಹಿಂದಿನಂತೆಯೆ ಸಾಗುತ್ತಿವೆ. ಆದ್ದರಿಂದ ಹಸ್ತಪ್ರಯೋಗವೂ ನವಸಂಸ್ಕೃತಿಯ ಪರಿಣಾಮವೆ? ಅಥವಾ ನೂರಾರು ಶತಕಗಳಿಂದ ನಡೆದುಬಂದಿರುವುದೇ? ಎಂಬುವನ್ನು ನಿರ್ಧರಿಸಲು ವಿವಿಧ ಜನಾಂಗಗಳಲ್ಲಿಯ ಹಸ್ತಪ್ರಯೋಗದ ಪ್ರಚುರತೆಯನ್ನು ಗಮನಿಸಬೇಕಾಗುವದು.

ಮೊದಲು ಅನಾಗರಿಕ ಜನಾಂಗಗಳನ್ನು ನೋಡುವಾ. ಜನಾಂಗಶಾಸ್ತ್ರದ ವಿದ್ವಾಂಸರೆಲ್ಲರೂ ಅನಾಗರಿಕ ಜನಾಂಗಗಳಲ್ಲಿ ಹಸ್ತಪ್ರಯೋಗವು ತೀರ ಚಿಕ್ಕ ವಯಸ್ಸಿನಲ್ಲಿಯೇ ವ್ಯಕ್ತವಾಗುವುದೆಂದು ಅಭಿಪ್ರಾಯಪಡುತ್ತಾರೆ. ಅಮೇರಿಕೆಯ ಹೊಟಂಟೊಟ್ ಜನಾಂಗದಲ್ಲಿ ಚಿಕ್ಕ ಹುಡುಗ ಹುಡುಗಿಯರು ನಾಚಿಕೆಯಿಲ್ಲದೆ ಪ್ರಕಟವಾಗಿ ಹಸ್ತಪ್ರಯೋಗವನ್ನು ಮಾಡಿಕೊಳ್ಳುತ್ತಾರೆ. ಅವರ

ಕತೆಗಳಲ್ಲಿ ಆ ವಿಷಯದ ವರ್ಣನೆಗಳೂ ಬೇಕಾದಷ್ಟು ಬರುತ್ತವೆ. ಪ್ರೊ. ಮಾಲಿನಾಸ್ಕಿಯು ತನ್ನ 'ಸೆಕ್ಶುಅಲ್ ಲೈಫ್ ಆಫ್ ಸ್ಯಾವೇಜಿಸ್' ಎಂಬ ಪುಸ್ತಕದಲ್ಲಿ ಹೀಗೆ ಹೇಳುತ್ತಾನೆ. "ಟ್ರೊಬ್ರಿಯಾಂಡ್ ದ್ವೀಪಗಳ ನಿವಾಸಿಗಳಲ್ಲಿ ವಿಪುಲವಾದ ಕಾಮಸ್ವಾತಂತ್ರ್ಯವಿದೆ. ತಂದೆಯು ಬತ್ತಲೆಯಾಗಿದ್ದು ಸಮುದ್ರತೀರದಲ್ಲಿ ನಿಂತು ಮೀನು ಹಿಡಿಯುತ್ತಿರುವಾಗ ಕುಮಾರಿಯರು ಅಲ್ಲಿಯೆ ನಿಂತು ನೋಡುವರು. ಚಿಕ್ಕ ವಯಸ್ಸಿನಿಂದಲೆ ಹುಡುಗ ಹುಡುಗಿಯರು ಕಾಮನಾಟಗಳನ್ನು ಆಡುವರು. ಆ ಆಟಗಳಲ್ಲಿ ಕೈ ಮತ್ತು ಬಾಯಿಯನ್ನು ಕೂಡ ಸ್ವೇಚ್ಛೆಯಾಗಿ ಉಪಯೋಗಿಸುವರು ಅಲ್ಲಿಯ ಹುಡುಗರ ಕಾಮಜೀವನವು ೧೦–೧೨ ವರ್ಷದೊಳಗಾಗಿ, ಹುಡುಗಿಯರದು ೬–೮ ವರ್ಷಗಳೊಳಗಾಗಿ ಪ್ರಾರಂಭವಾಗುವದು. ಬಾಲ್ಯದ ಕಾಮನಾಟಗಳಿಂದ ಅವರಿಗೇನೂ ಅಪಾಯವಾಗುವುದಿಲ್ಲ."

ಮಾರ್ಗರೆಟ್ ಮೀಡ್ ಎಂಬವಳು 'ಕಮಿಂಗ್ ಆಫ್ ಏಜ್ ಇನ್ ಸಾಮೋಆ' ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾಳೆ. "ಸಾಮೋಆ ದ್ವೀಪದಲ್ಲಿ ಕಾಮಜೀವನಕ್ಕೆ ಪ್ರತಿಬಂಧಗಳಾಗಲಿ, ಬಹಿಷ್ಕಾರಗಳಾಗಲಿ ಬಹಳ ಕಡಿಮೆಯಾಗಿವೆ. ಅದರಿಂದ ಅವರ ಜೀವನದ ಮೇಲೂ ಒಳ್ಳೆ ಪರಿಣಾಮವಾಗಿದೆ. ಬಹುಶಃ ೬–೭ ವರ್ಷದ ಪ್ರತಿಯೊಬ್ಬ ಹುಡುಗಿಯೂ ಹಸ್ತಪ್ರಯೋಗವನ್ನು ಮಾಡಿಕೊಳ್ಳುತ್ತಾಳೆ. ಹುಡುಗರಂತೂ ಗುಂಪುಗುಂಪಾಗಿ ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತಾರೆ. ಆದರೂ ಅಲ್ಲಿ ರೋಗ, ಕಾಮಮಾಂದ್ಯ ಅಥವಾ ನಪುಂಸಕತೆಯ ಸುದ್ದಿಯೆ ಇಲ್ಲ"

ಫ್ರಿಚ್ ಎಂಬ ಜನಾಂಗಶಾಸ್ತ್ರಿಯು ನಾಮಾ ಜನಾಂಗದ ವಿಷಯದಲ್ಲಿ ಅದೆ ಮಾತನ್ನು ಹೇಳುತ್ತಾನೆ. 'ನಾಮಾ' ಜನರಲ್ಲಿ ಹಸ್ತಪ್ರಯೋಗವು ಬಹಳ ಪ್ರಚುರವಾಗಿದೆ. ಅವರ ಕೆಲವು ಪರ್ವದಿನಗಳಲ್ಲಿ ಹಸ್ತಪ್ರಯೋಗವು ಒಂದು ವಿಧಿಯಾಗಿಬಿಟ್ಟಿದೆ. ಹಸ್ತಪ್ರಯೋಗದ ವರ್ಣನೆಯಿರದ ಕತೆಗಳಿಗೆ ಅಲ್ಲಿ ವಿಶೇಷ ಪ್ರಾಶಸ್ತ್ಯವಿಲ್ಲವಂತೆ. ಮಾಂಟೆಗಾಝಾ ಎಂಬ ಇನ್ನೊಬ್ಬ ಜನಾಂಗಶಾಸ್ತ್ರಜ್ಞನು 'ಪೆರಾಗ್ವೆ' ಮೊದಲಾದ ಪ್ರದೇಶಗಳಲ್ಲಿ ಹುಡುಗ ಹುಡುಗಿಯರು ಪೂರ್ಣ ಬತ್ತಲೆಯಾಗಿ ಒಂದೇ ಕಡೆಯಲ್ಲಿ ಕೂಡಿ ಆಡುತ್ತಾರೆ; ಆಗ ಜನನೇಂದ್ರಿಯಗಳನ್ನು ಉದ್ರೇಕಿಸಿಕೊಳ್ಳುವುದೂ ಸಂಭೋಗಕ್ಕೆ ಪ್ರಯತ್ನ

ಪಡುವುದೂ ಅವರ ಆಟಗಳೆ ಆಗಿರುತ್ತವೆ ಎಂದು ಹೇಳಿದ್ದಾನೆ ಆಸ್ಟ್ರೇಲಿಯಾ, ಪೊಲಿನೇಶಿಯಾ ಮತ್ತು ದಕ್ಷಿಣ ಆಫ್ರಿಕದ ಎಷ್ಟೋ ಜನಾಂಗಗಳಲ್ಲಿ ಹಸ್ತ ಪ್ರಯೋಗವು ಗುಂಪಾಗಿ ಅಥವಾ ಏಕಾಂಗಿಯಾಗಿ ಮಾಡಿಕೊಳ್ಳಲ್ಪಡುತ್ತದೆ ಎಂದು ಜಗತ್ತಿನ ಪ್ರವಾಸಿಗಳು ವರ್ಣಿಸಿದ್ದಾರೆ ಬಹುತರವಾಗಿ ಅನಾಗರಿಕ ಜನಾಂಗಗಳಲ್ಲಿ ಬಾಲ್ಯದ ಕಾಮಲೀಲೆಗಳನ್ನೂ ಮಿಕ್ಕ ಆಟಗಳಂತೆಯೇ ಪರಿಗಣಿಸುತ್ತಾರೆ.

ಇನ್ನು ನಾಗರಿಕ ಜನಾಂಗಗಳ ಕಡೆಗೆ ಹೊರಳುವಾ. ಡಾ. ರೋಬಿಯು ಅಮೇರಿಕೆಯಲ್ಲಿ ಎಂದೂ ಮುಷ್ಟಿಮೈಥುನವನ್ನು ಮಾಡಿಕೊಳ್ಳದ ಪುರುಷರು ಅಪರೂಪವೆಂದೂ ಅನೇಕರು ಎಂಟು ವರ್ಷಗಳ ಮೊದಲೆ ಆ ಚಟವನ್ನು ಕಲಿಯುವರೆಂದೂ ಅಭಿಪ್ರಾಯಪಟ್ಟಿದ್ದಾನೆ. ಡಾ ಕ್ಯಾಥೆರಿನ್ ಡೇವಿಯು ಅಮೇರಿಕೆಯ ೧೦೦೦ ಕಾಲೇಜ ತರುಣಿಯರನ್ನು ಪರಿಶೀಲಿಸಿ ಅವರಲ್ಲಿ ನೂರಕ್ಕೆ ೬೦ ಮಂದಿ ಹಸ್ತಪ್ರಯೋಗವನ್ನು ಮಾಡಿಕೊಳ್ಳುವರೆಂದು ಕಂಡು ಹಿಡಿದಿದ್ದಾಳೆ. ಡಾ. ಹ್ಯಾಮಿಲ್‌ಟನ್‌ನು ಗಂಡಸರಲ್ಲಿ ನೂರಕ್ಕೆ ೯೭ ಹೆಂಗಸರಲ್ಲಿ ೭೪ ಮಂದಿ ಜೀವನದಲ್ಲಿ ಯಾವುದಾದರೊಂದು ಕಾಲದಲ್ಲಿ ಹಸ್ತಪ್ರಯೋಗ ಮಾಡಿಕೊಳ್ಳುವರೆಂದಿದ್ದಾನೆ. ಇಂಗ್ಲಂಡಿನ ರುಗ್ಬಿ ಸ್ಕೂಲಿನ ವೈದ್ಯ ಡಾಕ್ಟರ್ ಡ್ಯೂಕ್ಸ್‌ನ ಅಭಿಪ್ರಾಯದಂತೆ ಅಲ್ಲಿಯ ಮಾಧ್ಯಮಿಕ ಶಾಲೆಯ ನೂರಕ್ಕೆ ೯೦–೯೫ ಹುಡುಗರು ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತಾರೆ. ಜರ್ಮನಿಯ ಪ್ರೊ. ಜೂಲಿಯನ್ ಮಾರ್ಕ್ಯೂಸನು ಪ್ರತ್ಯಕ್ಷಾನುಭವದಿಂದ ನೂರಕ್ಕೆ ೯೨ ಗಂಡಸರು ಹಸ್ತಪ್ರಯೋಗ ಮಾಡಿಕೊಳ್ಳುವರೆಂದೂ ಬ್ರಹ್ಮಚಾರಿಣಿಯರು ಕೂಡ ಮುಟ್ಟಿನ ಸಮಯದ ಹಿಂದುಮುಂದಿನ ಅವಧಿಯಲ್ಲಿ ವಿಶೇಷವಾಗಿ ಹಸ್ತಮೈಥುನವನ್ನು ಮಾಡಿಕೊಳ್ಳುವರೆಂದೂ ಹೇಳಿದ್ದಾನೆ.

ಪ್ರೊ. ಹ್ಯಾವ್‌ಲೊಕ್ ಎಲಿಸನು ವಿವಿಧ ದೇಶಗಳಲ್ಲಿಯ ಸ್ತ್ರೀಪುರುಷರ ಹಸ್ತಪ್ರಯೋಗದ ಪ್ರಸಾರವನ್ನು ಹೀಗೆ ಕ್ರೋಢೀಕರಿಸಿದ್ದಾನೆ: “ ನನಗೆ ಗೊತ್ತಿದ್ದ ಮಟ್ಟಿಗೆ ಸ್ವೀಡನದ ಗುಡ್ಡಗಾಡಿನ ಜನರೆಲ್ಲ ಮಿತವಾದ ಹಸ್ತ ಪ್ರಯೋಗವನ್ನು ಮಾಡಿಕೊಳ್ಳುವರು. ಉಷ್ಣಪ್ರದೇಶಗಳಲ್ಲಿ ಆ ಚಟವು ಚಿಕ್ಕಂದಿನಲ್ಲಿಯೆ ಪ್ರಾರಂಭವಾಗುತ್ತದೆ. ಉದಾಹರಣಾರ್ಥ ಸ್ಪೇನದ ಹುಡುಗ

ಹುಡುಗಿಯರಿಗೆಲ್ಲ ಆ ಚಟವಿರುತ್ತದೆ. ಆ ಚಟವನ್ನು ಅವರು ಶೈಶವದಲ್ಲಿಯೆ ಮೊಲೆಯುಣಿಸುವ ದಾದಿಯರಿಂದ ಕಲಿಯುವರು. ಫ್ರಾನ್ಸದಲ್ಲಿ ಒಬ್ಬ ಚರ್ಚಾಧಿಕಾರಿಯು ಹೇಳಿದ ಮೇರೆಗೆ ಚರ್ಚಿನಲ್ಲಿ ಮೊದಲನೆಯ ಸಲ ‘ತಮ್ಮ ತಪ್ಪನ್ನು ಒಪ್ಪಿಕೊಳ್ಳುವಾಗ’ ಹನ್ನೆಡರಲ್ಲಿ ಹನ್ನೊಂದು ಹುಡುಗಿಯರು ಹಸ್ತಪ್ರಯೋಗ ಮಾಡಿಕೊಳ್ಳುತ್ತಿದ್ದುದನ್ನು ಒಪ್ಪಿಕೊಂಡರು ಸ್ಟ್ಯಾನ್ಲೆ ಹಾಲನು ಪರೀಕ್ಷಿಸಿದ ಅಮೇರಿಕೆಯ ಒಂದು ರಿಫಾರ್ಮ್ ಸ್ಕೂಲಿನಲ್ಲಿ ಹಸ್ತಪ್ರಯೋಗವನ್ನು ಮಾಡಿಕೊಳ್ಳದಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರೆ ಇಲ್ಲವೆಂದಿದ್ದಾನೆ. ಯಾರು ಹೆಚ್ಚಾಗಿ ಅದನ್ನು ಮಾಡಿಕೊಳ್ಳುವರೊ ಅವರನ್ನು ಗಟ್ಟಿಗರೆಂದು ತಿಳಿಯುತ್ತಾರಂತೆ.

ಎನ್‌ಸೈಕ್ಲೊಪೀಡಿಯ ಆಫ್ ಸೆಕ್ಸ್ಯುಅಲ್ ನಾಲೆಜದಲ್ಲಿ ಹಸ್ತಪ್ರಯೋಗವು ಜಗತ್ತಿನ ವಿವಿಧ ನಾಗರಿಕ ಜನಾಂಗಗಳಲ್ಲಿ ಎಷ್ಟರ ಮಟ್ಟಿಗೆ ಪ್ರಚುರವಾಗಿದೆ ಎಂಬ ಬಗ್ಗೆ ವಿವಿಧ ವಿಜ್ಞಾನಿ ಹಾಗೂ ಡಾಕ್ಟರರ ಅಭಿಪ್ರಾಯಗಳನ್ನು ಹೀಗೆ ಒಟ್ಟುಗೂಡಿಸಲಾಗಿದೆ: ರಶಿಯದಲ್ಲಿ ಶಾಲೆಗೆ ಹೋಗುವ ವಯಸ್ಸಿನ ನೂರಕ್ಕೆ ೬೦ ಹುಡುಗ ಹುಡುಗಿಯರಿಗೆ ಸ್ವರತಿಯ ಚಟಗಳಿವೆ ಅಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ಮತ್ತು ವೈದ್ಯರಲ್ಲಿ ಸಂಶೋಧಿಸಿ ನೂರಕ್ಕೆ ಅನುಕ್ರಮವಾಗಿ ೭೧ ಮತ್ತು ೯೦ ಮುಂದಿಗೆ ಸ್ವರತಿಯ ಅಭ್ಯಾಸವಿದೆಯೆಂದು ಮಿರೊಸ್ಕಿಯು ಹೇಳುತ್ತಾನೆ. ಮಾರ್ಕೋನ ಅಭಿಪ್ರಾಯದಂತೆ ತರುಣ ಅಪರಾಧಿಗಳಲ್ಲಿ ನೂರಕ್ಕೆ ೮೫ ಜನರಿಗೆ ಆ ಚಟವಿದೆ. ಬುಡಾಪೆಸ್ಟದ ಡೂಷನ ಮತದಲ್ಲಿ ನೂರಕ್ಕೆ ೯೬ ಸ್ವರತರಿದ್ದಾರೆ ಡಾ. ಹರ್ಶಫೀಲ್ಡನು ಬರ್ಲಿನಿನಲ್ಲಿ ಪರೀಕ್ಷಿಸಿದ ೫೦೦ ಜನರಲ್ಲಿ ನೂರಕ್ಕೆ ೯೬ ಸ್ವರತರಿದ್ದುದು ಕಂಡುಬಂತು. ಬ್ರೋಕ್‌ಮನ್ನನು ಅಮೇರಿಕೆಯ ಧಾರ್ಮಿಕ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ನೂರಕ್ಕೆ ೯೯ ಸ್ವರತರಿದ್ದಾರೆಂದು ನಿಶ್ಚಯಿಸಿದ್ದಾನೆ. ಪ್ರೊ. ಯಂಗ್ ಮತ್ತು ಬರ್ಗರರು ನೂರಕ್ಕೆ ನೂರು ಜನರೂ ಸ್ವರತರಿದ್ದಾರೆಂದು ಹೇಳುತ್ತಾರೆ. ಕೊನೆಗೆ ಡಾ ವಿಲ್‌ಹೆಲ್ಮ್ ಸ್ಟೀಕೆಲ್ ಎಂಬ ವ್ಹಿಯೆನ್ನದ ಜಗತ್ಪ್ರಸಿದ್ಧ ಮನೋವಿಜ್ಞಾನಿಯು ಹೀಗೆ ಅನ್ನುತ್ತಾನೆ: Every body masturbates; to this rule there is no exception ಅಂದರೆ ಪ್ರತಿಯೊಬ್ಬ ವ್ಯಕ್ತಿಯೂ ಸ್ವರತಿಯನ್ನು ಆಚರಿಸುತ್ತದೆ. ಈ ನಿಯಮಕ್ಕೆ ಅಪವಾದವಿಲ್ಲ.

## ಧಾರ್ಮಿಕ ದೃಷ್ಟಿ

ಯಾವುದೊಂದು ಸಂಗತಿಯ ವಿಷಯದಲ್ಲಿ ಧಾರ್ಮಿಕ ದೃಷ್ಟಿಯಿಂದ ವಿಚಾರ ಮಾಡಬೇಕಾದರೆ ಬುದ್ಧಿಯನ್ನು ಒಂದೆಡೆಗೆ ಕಟ್ಟಿಡುವ ಪರಿಪಾಠವಿದೆ. ಗುರುಗಳು, ಸ್ವಾಮಿಗಳು ಅಥವಾ ಸಮಾಜದ ಮುಂದಾಳುಗಳು ಹೇಳುವುದೆ ಸರಿ. ಅವರ ಮನಸ್ಸಿಗೆ ಬಾರದ್ದೆಲ್ಲ ತಪ್ಪು. ಪ್ರತಿಯೊಬ್ಬನೂ ಬುದ್ಧಿಯನ್ನು ಉಪಯೋಗಿಸಿದರೆ ಗುರುಸ್ವಾಮಿಗಳು ಗದ್ದುಗೆಯಿಂದ ಇಳಿಯಬೇಕಾದೀತು. ಆದ್ದರಿಂದಲೇ ಧರ್ಮಕ್ಕೂ ಬುದ್ಧಿಗೂ ದೂರದೂರ. ಬುದ್ಧಿಯನ್ನು ಒತ್ತೆ ಇಟ್ಟು ಮಾಡುವ ವಿಚಾರಗಳು ಕೆಲವರಿಗೆ ಮಾನಸಿಕ ಸಮಾಧಾನವನ್ನು ಕೆಲಹೊತ್ತು ಕೊಡಬಹುದಾದರೂ ಅವುಗಳಿಂದ ಜ್ಞಾನದ ಅಪೇಕ್ಷೆ ಮಾತ್ರ ಮಾಡಕೂಡದು. ಒಬ್ಬ ಸ್ವಾಮಿಯು 'ಇದು ಪಾಪ' ಎಂದುಬಿಟ್ಟರಾಯಿತು. ಅದೇಕೆ ಪಾಪ? ಎಂದು ನೀವು ಕೇಳಿದರೆ 'ನಾನು ಹೇಳುವೆನೆಂದು' ಅಥವಾ ಆ ಸ್ವಾಮಿಯಲ್ಲಿ ಕೊಂಚ ವಿನಯವಿದ್ದರೆ 'ನಮ್ಮ ಅಜ್ಜ ಹೇಳಿದನೆಂದು' ಎಂಬುದೆ ಖಂಡಿತವಾದ ಉತ್ತರ.

ಈ ಬಗೆಯ ವಿಚಾರಸರಣಿಗೆ ಹಸ್ತಪ್ರಯೋಗವೂ 'ಪಾಪ' ವೆನಿಸಿ ಬಿಟ್ಟರೆ, ಯಾಕೆ ಎಂದು ಕೇಳುವ ಧೈರ್ಯವಾದರೂ ನಮಗೆಲ್ಲಿಂದ ಬರಬೇಕು? ಬಹಳವಾದರೆ ಅದರಿಂದ ಮನುಷ್ಯನು ನರಕಕ್ಕೆ ಹೋಗುತ್ತಾನೆ. ಆದ್ದರಿಂದ ಪಾಪ ಎಂದರೆ ಬುದ್ಧಿಯ ಪರಮಾವಧಿಯಾಯಿತು. ಹಸ್ತಪ್ರಯೋಗದಿಂದ ನರಕಕ್ಕೆ ಯಾಕೆ ಮತ್ತು ಹೇಗೆ ಹೋಗುತ್ತಾರೆ ಎಂದು ನೀವು ತುಸು ಅಧಿಕ ಪ್ರಸಂಗ ಮಾಡಿದರೆ 'ಹೇಳಿದಷ್ಟು ಕೇಳೋ! ನಿನ್ನ ಜಾಣತನ ಮಿಂಚಿಸಬೇಡ, ಹುಚ್ಚು ನುಂ...........' ಎಂಬ ಶಿಷ್ಟವಾದ ಮೃದುವಾದ ಉತ್ತರ. ಒಟ್ಟಿನಲ್ಲಿ ಹಸ್ತಪ್ರಯೋಗದ ಪರಿಣಾಮವನ್ನು ತಿಳಿದುಕೊಳ್ಳುವವರು ಧಾರ್ಮಿಕ ದೃಷ್ಟಿಯಲ್ಲಿ ಸಾಕಷ್ಟು ತೃಪ್ತಿಕರವಾದ ಜ್ಞಾನವನ್ನು ಗಳಿಸಲಾರರು. ಏಕೆಂದರೆ **ಧಾರ್ಮಿಕರ ದೃಷ್ಟಿಯಲ್ಲಿ ಕಾಮಕ್ಕೆ ಸಂಬಂಧಿಸಿದುದೆಲ್ಲ ಪಾಪ.** ಧಾರ್ಮಿಕ ಪಾಶ್ಚಾತ್ಯರಂತೂ ಮಾನವಲೋಕದ ಮೂಲ ಸ್ತ್ರೀಪುರುಷರಿಂದ ಆದಮ ಮತ್ತು ಈವರು ಕಾಮಫಲವನ್ನು ಸವಿದುದರಿಂದಲೆ ಭವರೋಗಕ್ಕೆ ತುತ್ತಾದರೆಂದು ನಂಬುತ್ತಾರೆ. ಕಾಮವು ಅಮರನಾದ ಮನುಷ್ಯನಿಗೆ ಸಾವನ್ನು ತಂದ ಅನಿಷ್ಟವಂತೆ. ಆದರೆ 'Ye go forth and multiply' ಅಂದರೆ,

ಮುಂದೆ ಸಾಗಿರಿ ಮತ್ತು ನಿಮ್ಮ ಸಂಖ್ಯೆಯನ್ನು ಬೆಳಿಸಿಕೊಳ್ಳಿರಿ (ಮಕ್ಕಳನ್ನು ಹುಟ್ಟಿಸಿರಿ) ಎಂಬ ಬೈಬಲಿನಲ್ಲಿಯ ದೇವರ ಅಪ್ಪಣೆಗೆ ಆ ಧಾರ್ಮಿಕರು ಏನು ಅರ್ಥ ಮಾಡುವರೋ? ಕಾಮವಿಲ್ಲದೆ ಮಕ್ಕಳನ್ನು ಹುಟ್ಟಿಸುವ ಉಪಾಯ ವೇನಾದರೂ ಗೊತ್ತಿತ್ತೇ ಅವರಿಗೆ?

ಆದರೆ **ಧರ್ಮವು ಬರಿ ಉಪದೇಶಿಸಲಿಕ್ಕೇ ಹೊರತು ಆಚರಿಸ ಲಿಕ್ಕಲ್ಲ.** ಧರ್ಮವು ಕಾಮವನ್ನು ಎಷ್ಟೇ ಹೀಗಳೆದಿದ್ದರೂ ಧಾರ್ಮಿಕರಷ್ಟು ಕಾಮಲಂಪಟರು ಬೇರೆ ಯಾರೂ ಇರಲಿಲ್ಲವೆಂಬುದು ಇತಿಹಾಸ ಪ್ರಸಿದ್ಧ ವಾಗಿದೆ. ದೇವರಿಗೆಂದು ದೇವದಾಸಿಯರನ್ನರ್ಪಿಸಿ ಗುಪ್ತವಾಗಿ ಅವರನ್ನು ಪೂಜಾರಿಗಳು ತಮ್ಮ ಕಾಮದಾಸಿಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಗಂಡ ಸತ್ತ ತರುಣಿಯರನ್ನು ಗಂಡನೊಡನೆ ಚಿತೆಯಲ್ಲಿಟ್ಟು ಅದರ ಬುಡದಲ್ಲಿ ಇರುವ ಸುರಂಗಮಾರ್ಗದಿಂದ ಅವಳನ್ನು ಉಳಿಸಿ ಸ್ವಾಮಿಗಳು ತಮ್ಮ ವಿಲಾಸಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಮತ್ತೆ ಈಗಿನ ಅನೇಕ ಉಪಾಸನಾ ಮಹಾರಾಜರು ವಾಸನಾಪೂಜಾರಿಗಳೆಂಬುದೂ ವಾಚಕರಿಗೆ ಗೊತ್ತಿದೆ. ಕೆಲ ಕೆಲವು ಮಠದ ಸ್ವಾಮಿಗಳ ಕಾಮಲೀಲೆಗಳೂ ಜಗತ್ಪ್ರಸಿದ್ಧವಾಗಿವೆ. ಅಸಂಯತ ಕಾಮಲೀಲೆಗಳಿಂದ ಗುಹ್ಯರೋಗ, ಕುಷ್ಠ, ಕ್ಷಯಗಳಿಂದ ಬಳಲಿದ ಸ್ವಾಮಿಗಳ ಉದಾಹರಣೆಗಳು ಬೇಕಾದಷ್ಟಿವೆ. ಅವರಲ್ಲಿ ಹರಿಕಥಾದಾಸರೂ, ಪುರಾಣಿಕರೂ ಬೇಕಾದಷ್ಟಿದ್ದಾರೆ. ವಸ್ತುಸ್ಥಿತಿಯು ಹೀಗಿದ್ದರೂ ಕಾಮವು ಪಾಪಕರ; ಏಕೆಂದರೆ ಧರ್ಮಕ್ಕೆ ಐಹಿಕಸುಖದ ಮೇಲೆಯೆ ವಕ್ರದೃಷ್ಟಿಯಿದೆ. ಆದ್ದರಿಂದ ಸುಖಾರೋಗ್ಯಗಳಿಗೆ ಸಾಧಕವಾದ ವಿಷಯಗಳೆಷ್ಟೋ ಧರ್ಮಕ್ಕೆ ತ್ಯಾಜ್ಯವಾಗಿವೆ. ಉದಾಹರಣಾರ್ಥ ನೀರುಳ್ಳಿಯು ತುಷ್ಟಿ, ಪುಷ್ಟಿ, ವೀರ್ಯ ವೃದ್ಧಿಯನ್ನುಂಟು ಮಾಡುವುದೆಂದು ಆಯುರ್ವೇದವು ಹೇಳುತ್ತದೆ. ಉದ್ದು ವೀರ್ಯವರ್ಧಕವಾದ ಧಾನ್ಯವಾಗಿದೆ. ಅವೆರಡೂ ಧರ್ಮಸಾಧಕರಿಗೆ ತ್ಯಾಜ್ಯ. ಉಪವಾಸ ವನವಾಸಗಳಿಂದ ಇಹದಲ್ಲಿ ಕಷ್ಟಪಟ್ಟರೆ ಪರದಲ್ಲಿ ಸುಖವಿದೆ ಯೆಂಬುದೆ ಧಾರ್ಮಿಕರ ಮುಖ್ಯ ತತ್ವವಾಗಿದೆ. ಸುಖದ ಹಾದಿ ಪ್ರತಿಯೊಬ್ಬ ನಿಗೂ ತಿಳಿದರೆ ಧರ್ಮವನ್ನೂ ಧರ್ಮಗುರುಗಳನ್ನೂ ಯಾರು ಕೇಳುವರು? ಆದ್ದರಿಂದ ಸುಖದ ವಿಷಯಗಳಿಗೆಲ್ಲ ಕಣ್ಣುಮುಚ್ಚಿರಿ ಎಂಬುದು ಅವರ

ಉಪದೇಶ. ಮತ್ತು ಅದರಂತೆ ಸಾಮಾನ್ಯರು ಕಣ್ಣು ಮುಚ್ಚಿದರೆಂದರೆ ಅವರ ಎಡೆಯನ್ನು ತಾವು ದೋಚಿಕೊಳ್ಳುವುದೆ ಅವರ ತಂತ್ರ.

ಪುರಾತನ ಭಾರತದ ಧರ್ಮವು ಕಾಮದ ಯಾವ ಚಟುವಟಿಕೆಯನ್ನೂ ತುಚ್ಛವೆಂದು ಎಣಿಸಿರಲಿಲ್ಲ ಅಲ್ಲದೆ ಕಾಮವನ್ನು ಸಕಾಲದಲ್ಲಿ ಮಿತವಾಗಿ ಸೇವಿಸುವುದರಿಂದ ಉಂಟಾಗುವ ಹಿತವನ್ನು ಅವರು ಮನಗಂಡಿದ್ದರು ಹಸ್ತಪ್ರಯೋಗದ ವಿಷಯಕ್ಕೆ ಪುರಾತನ ಧರ್ಮಗಳಲ್ಲಿ ಎಲ್ಲಿಯೂ ಲಕ್ಷ್ಯವನ್ನು ಪೂರೈಸಿಲ್ಲ ಕ್ರಿಶ್ಚಿಯನ್ ಮತ್ತು ತತ್ಸದೃಶವಾದ ಧರ್ಮಗಳು ಭಾರತಕ್ಕೆ ಬಂದಾಗಿನಿಂದಲೆ ಕಾಮವಿಷಯಕ ವ್ಯವಹಾರಗಳೆಲ್ಲ ಕುತ್ಸಿತವೆಂದು ಭಾವಿಸಲ್ಪಡಹತ್ತಿದವು ಆದ್ದರಿಂದ ಭಾರತದಲ್ಲಿಯು ಹಸ್ತಪ್ರಯೋಗದ ವಿಷಯವಲ್ಲಿಯ ತಿರಸ್ಕಾರವೂ ಪರಧರ್ಮೀಯರು ಇಲ್ಲಿ ಕಾಲಿಟ್ಟ ಮೇಲೆಯೆ ಪ್ರಾರಂಭವಾಯಿತೆನ್ನಬಹುದು ಅಲ್ಲಿಂದ ಧರ್ಮಗುರುಗಳು ವಿಚಾರಶಕ್ತಿಯನ್ನು ಬತ್ತಿಸುವುದೆ ತಮ್ಮ ಕರ್ತವ್ಯವೆಂದು ತಿಳಿದುದರಿಂದ ಹಸ್ತಪ್ರಯೋಗವು ಪಾಪವೆಂದೂ ಆಯಿತು; ಆದರೆ ಏಕೆ ಪಾಪವೆಂಬ ವಿಚಾರಕ್ಕೆ ಆಸ್ಪದವೆ ಉಳಿಯಲಿಲ್ಲ

ಅದಕ್ಕೆ ಇನ್ನೂ ಒಂದು ಕಾರಣವಿದೆ. ಬಹುಶಃ ಹಿಂದಿನ ಧರ್ಮಮಾರ್ತಾಂಡರೆಲ್ಲ (ವಿಶೇಷವಾಗಿ ಪಾಶ್ಚಾತ್ಯ ದೇಶಗಳಲ್ಲಿ) ವೈದ್ಯರೂ ಆಗಿರುತ್ತಿದ್ದರು. ಅವರು ಜನರನ್ನು ಅವೈಜ್ಞಾನಿಕ ವರ್ಣನೆಗಳಿಂದ ಬೆದರಿಸಿ ತಮ್ಮ ಹೊಟ್ಟೆ ಬೆಳಿಸಿಕೊಳ್ಳುತ್ತಿದ್ದರು. ಧರ್ಮಗುರುಗಳೇ ವೈದ್ಯರಾಗಿರುದಿದ್ದರೂ ವೈದ್ಯರಿಗೂ ಧರ್ಮಗುರುಗಳಿಗೂ ನಿಕಟ ಸ್ನೇಹವಿರುತ್ತಿತ್ತು. ಮತ್ತು ಮಂತ್ರ, ತಂತ್ರ, ಪ್ರಾಯಶ್ಚಿತ್ತಗಳೂ ವೈದ್ಯಕೀಯ ಭಾಗವಾಗಿರುತ್ತಿದ್ದುದರಿಂದ ಧಾರ್ಮಿಕರೂ ವೈದ್ಯರೂ ಏಕಕಂಠದಿಂದ ಹಸ್ತಪ್ರಯೋಗವನ್ನು ಶಪಿಸಿ ಅದರಿಂದ ಮಾನಸಿಕ ಆಘಾತವನ್ನು ಪಡೆದು ತಲ್ಲಣಿಸುವವರಿಗೆ ಮಣಿ, ಮಂತ್ರೌಷಧಿಗಳಿಂದ ಉಪಚರಿಸಿ ತಮ್ಮ ಭಾಂಡಾರವನ್ನು ತುಂಬಿಸಿಕೊಳ್ಳುವುದು ಈಗೆರಡು ಶತಮಾನಗಳಿಂದ ನಡೆದಿದೆ. ಒಟ್ಟಿನಲ್ಲಿ ಹಸ್ತಪ್ರಯೋಗವು ಧಾರ್ಮಿಕರಿಗೆ ಒಂದು ಪಾಪವೆನಿಸುವುದು. ಯಾಕೆಂದು ಕೇಳಬೇಡಿರಿ. ಈ ವಿಷಯದಲ್ಲಿ ಸಾಮಾನ್ಯರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕಾದರೆ

ಪಾರಂಪರಿಕತೆಯನ್ನು ಕೆದರಿ ನೋಡಬೇಕು. ಆದರಲ್ಲಿ ಪಾರಂಪರಿಕವಾಗಿ ವೈದ್ಯರ ಅಭಿಪ್ರಾಯಗಳೂ ಬದಲಾಗುತ್ತ ಬಂದುದು ವ್ಯಕ್ತವಾಗುತ್ತದೆ.

## ಪಾರಂಪರಿಕ ದೃಷ್ಟಿ

ಪಾರಂಪರಿಕ ದೃಷ್ಟಿಯಲ್ಲಿ ಜನಸಾಮಾನ್ಯರ ಅಭಿಪ್ರಾಯವು ಬರುತ್ತದೆ. ಸಮಾಜದ ಮುಂದಾಳುಗಳೂ, ಸುಶಿಕ್ಷಿತರೂ ಕೂಡ ಕೆಲವು ಪಾರಂಪರಿಕ ಅಭಿಪ್ರಾಯಗಳನ್ನಿಟ್ಟುಕೊಂಡಿರುತ್ತಾರೆ. ಮತ್ತು ಕೆಲಕೆಲವು ಸಲ ಧರ್ಮಕ್ಕೂ ಪರಂಪರೆಗೂ ಪೂರ್ವಪಶ್ಚಿಮದಷ್ಟು ಅಂತರವಿರುತ್ತದೆ. "ಒಬ್ಬ ವಿಶಿಷ್ಟ ಮುಲ್ಲಾನ ಗೋರಿಗೆ ಪ್ರದಕ್ಷಿಣೆ ಹಾಕಿದರೆ ಗರ್ಭಧಾರಣೆಯಾಗುತ್ತದೆ; ವಿವಿಧ ಭೂತಗಳಿಗೆ ಆಹುತಿ ಕೊಟ್ಟರೆ ಪೀಡೆ ತಪ್ಪುತ್ತದೆ; ಕುರಿ-ಕೋಣಗಳನ್ನು ಕಡಿದರೆ ಸಾಂಕ್ರಾಮಿಕ ರೋಗಗಳು ದೂರವಾಗುತ್ತವೆ" ಎಂದು ಅಜ್ಜಅಜ್ಜಿಯರು ಹೇಳುತ್ತಾರೆ. ಮತ್ತು ಚಾಚೂ ತಪ್ಪದೆ ಅದನ್ನು ನಡೆಸಿಕೊಂಡು ಬರುತ್ತಾರೆ. ಆದರೆ ಧರ್ಮವು ಅವನ್ನೆಲ್ಲ ಮಾಡಬಾರದೆಂದೂ ಒಬ್ಬನೆ ದೇವರನ್ನು ಪೂಜಿಸಬೇಕೆಂದೂ ವಿಧಿಸುತ್ತದೆ. ಕೆಲಕೆಲವು ಧಾರ್ಮಿಕರು ಇತ್ತ ಪರಬ್ರಹ್ಮನ ಧ್ಯಾನವನ್ನೂ ಮಾಡುವರು; ಅತ್ತ ಬೇತಾಳನಿಗೆ ಹೆಂಡ-ಮಾಂಸಗಳ ಬಲಿಯನ್ನೂ ಕೊಡುವರು. ಧರ್ಮಕ್ಕೆ ಆಧಾರಗ್ರಂಥಗಳಿರುತ್ತವೆ; ಆದರೆ ಪರಂಪರೆಗೆ ಕರ್ಣೋಪಕರ್ಣೇನ, ಮುಖೋಪಮುಖೇನ ಮುಂದೆ ಸಾಗುವುದೆ ದಾರಿ. ಪರಂಪರೆಯು ಮಾನವ ಲೋಕದ ಆದಿಯಿಂದ ಇದೆ. ಪರಂಪರೆಯು ಕೊಂಚ ಶೋಧಿಸಲ್ಪಟ್ಟು ಕಣಗಟ್ಟಿ ಆಗಾಗ್ಗೆ ಧರ್ಮರೂಪಕ್ಕೆ ಇಳಿಯುತ್ತದೆ. ಆದರೂ ಪರಂಪರೆಗಿರುವಂತಹ ಹಿಡಿತವು ಧರ್ಮಕ್ಕಿಲ್ಲ. ಏಕೆಂದರೆ, ಧರ್ಮವು ಪರಲೋಕದ ಸಾಧನವಷ್ಟೆ. ಆದರೆ ಪರಂಪರೆಯು ಹೆಜ್ಜೆಹೆಜ್ಜೆಗೂ ಪ್ರತಿಯೊಂದು ಮಾತು ಕೃತಿಯಲ್ಲಿಯೂ ತನ್ನ ಪ್ರಭಾವವನ್ನು ಕೆಡಹುವುದು. ಒಂದೇ ಮಾತಿನಲ್ಲಿ ಹೇಳುವುದೆಂದರೆ ಪಾರಂಪರಿಕತೆಯು ಮಾನವರ ಮುನ್ನಡೆಯ ದಿಕ್ಕನ್ನು ಹಿಂದೆಯೂ ತೋರಿಸುತ್ತಿತ್ತು; ಇಂದೂ ತೋರಿಸುತ್ತಿದೆ. ಧರ್ಮದ ವಿಧಾನಗಳಿಗೆ ಕಾರಣಗಳನ್ನು ಕೇಳಿದರೆ ತುಸು ವಾಗಾಡಂಬರದ ವಿವರಣೆಯನ್ನಾದರೂ ಕೊಡಬಹುದು. ಆದರೆ ಪರಂಪರೆಯ ಮಾತನ್ನು ಮರುಮಾತಾಡದೆ ಮನ್ನಿಸುವ ಪರಂಪರೆಯೆ ಇದೆ.

ಆದ್ದರಿಂದ ಬಹುತರ ಪರಂಪರೆಗಳೆಲ್ಲ ಗೂಢವಿದ್ಯೆಗೆ ಸೇರಿದವುಗಳಾಗಿವೆ. ಮನುಷ್ಯನು ತೀರ ಕಾಡುಸ್ಥಿತಿಯಲ್ಲಿದ್ದಾಗ ಜೀವನದ ಪ್ರತಿಯೊಂದಂಗದ ವಿಷಯಕ್ಕೂ ಕೆಲವು ಗೂಢಕಲ್ಪನೆಗಳಿದ್ದವು; ಕಾಮಜೀವನದ ವಿಷಯಕ್ಕೂ ಅನೇಕ ಗೂಢ ಗಂಭೀರ ಕಲ್ಪನೆಗಳನ್ನು ಕಟ್ಟಿಕೊಂಡಿದ್ದನು. ಮಗು ಹುಟ್ಟ ಬೇಕಾದರೆ ಸ್ತ್ರೀಪುರುಷರಿಬ್ಬರೂ ಅವಶ್ಯರಾಗಿರುವರೆಂಬುದು ಕಾಡುಮನುಷ್ಯ ನಿಗೆ ತಿಳಿದಿರಲಿಲ್ಲ. ಗರ್ಭ ಧರಿಸುವುದು ಸ್ತ್ರೀಯ ಸ್ವತಂತ್ರ ಕೆಲಸವಾಗಿತ್ತು. ವಾತಾವರಣ ಅಥವಾ ಸಸ್ಯಗಳಲ್ಲಿರುವ ಭೂತಾಂಶಗಳು ಪರ್ವಕಾಲಗಳಲ್ಲಿ ಸ್ತ್ರೀಶರೀರವನ್ನು ಪ್ರವೇಶಿಸಿ ಶಿಶುರೂಪವನ್ನು ಧರಿಸುವುವೆಂದು ಅವರು ತಿಳಿ ದಿದ್ದರು. ಅದಕ್ಕೆ ಸಂಭೋಗದ ಅವಶ್ಯಕತೆಯೂ ಇರಲಿಲ್ಲ. ಭಾರತೀಯ ಪುರಾಣಗಳಲ್ಲಿ ಕೂಡ ಪರ್ವತ, ಗಂಡುನದಿ, ಗಾಳಿಗಳಿಂದ ಗರ್ಭಧರಿಸಿದ ಸ್ತ್ರೀಯರಿದ್ದಾರೆ. ಈಗಲೂ ಯುರೋಪದ ಕೆಲವು ಭಾಗಗಳಲ್ಲಿ ಹುಡುಗಿಯರು ಚಂದ್ರನ ಕಡೆಗೆ ನೋಡಿ ಮಾಡಿ ಮೂತ್ರವಿಸರ್ಜನಕ್ಕೆ ಕೂಡಬಾರದೆಂಬ ಪರಂಪರೆಯಿದೆ. ಹಾಗೆ ಮಾಡಿದರೆ ಹುಡುಗಿಯು ಅವಿವಾಹಿತಳಾಗಿದ್ದರೂ ಚಂದ್ರನು ಅವಳಲ್ಲಿ ಗರ್ಭ ನಿಲ್ಲಿಸುವನೆಂದು ಅವರು ನಂಬುತ್ತಾರೆ.

ಕಾಡುಸ್ಥಿತಿಯಲ್ಲಿ ಮನುಷ್ಯಗೆ ಸಂತಾನೋತ್ಪತ್ತಿಯ ಸರಿಯಾದ ಕ್ರಮವು ತಿಳಿದಿರದಿದ್ದರೂ ಹುಡುಗ ಹುಡುಗಿಯರಲ್ಲಿ ವಿಶಿಷ್ಟ ವಯಸ್ಸಿನಲ್ಲಿ ಸ್ತ್ರೈಣನಗಳಲ್ಲಿ ಮಾರ್ಪಾಡುಂಟಾಗುವುದೂ ಅದೇ ಸಮಯಕ್ಕೆ ಪರಸ್ಪರ ಆಕರ್ಷಣ ಮೋಹಗಳುಂಟಾಗುವುದೂ ಅವನ ಲಕ್ಷ್ಯವನ್ನೆಳೆಯದಿರಲಿಲ್ಲ ಅದರಿಂದ ಯೌವನದಲ್ಲಿಯ ಉತ್ಸಾಹವೂ ಆಗಿನ ಪ್ರತಿಲಿಂಗಿಯ ಸಹವಾಸ ದಲ್ಲಿರುವ ಅವರ್ಣನೀಯವಾದ ಆನಂದವೂ ಯಾವುದೋ ದೇವತೆಗಳ ವರ ವಾಗಿರಬೇಕೆಂದು ಅವನು ತರ್ಕಿಸಿದುದು ಸ್ವಾಭಾವಿಕವಾಗಿದೆ. ಸುಖವನ್ನಾಗಲಿ ದುಃಖವನ್ನಾಗಲಿ ಕೊಡುವ ವಸ್ತು-ಶಕ್ತಿಗಳನ್ನು ದೇವಸ್ಥಾನಕ್ಕೇರಿಸುವುದು ಕಾಡುಬುದ್ಧಿಯ ಸಹಜಗುಣವಾಗಿದೆ. ಆದ್ದರಿಂದ ಹಿಂದಿನ ಮನುಷ್ಯನು ಯೌವನಾಧಿಪತಿ ಕಾಮನನ್ನು ವಿವಿಧ ರೀತಿಯಿಂದ ಪೂಜಿಸುತ್ತಿದ್ದನು. ಈಗಲೂ ಅನಾಗರಿಕ ಜನಾಂಗಗಳಲ್ಲಿ ಮದನೋತ್ಸವಗಳು ನಡೆಯುತ್ತವೆ. ಬೇಕಾದಷ್ಟು ನಾಗರಿಕರಾದ ನಾವು ಕೂಡ ಆ ಪರಂಪರೆಯನ್ನು ಬಿಡಲಾರದೆ ಸಾಧ್ಯವಾದಷ್ಟು ಅಶ್ಲೀಲವಾಗಿ ಪ್ರತಿವರುಷ ಕಾಮನ ಹಬ್ಬವನ್ನಾಚರಿಸುವೆವು.

ಹುಡುಗ ಹುಡುಗಿಯರ ಯೌವನೋದಯಕ್ಕೆ ಒಬ್ಬ ದೇವತೆಯನ್ನು ಕಲ್ಪಿಸಿದ ಮೇಲೆ ಆ ಕಾಲಕ್ಕೆ ಸ್ಖಲಿಸಲಾರಂಭಿಸುವ ರಜೋವೀರ್ಯಗಳಿಗೂ ಗೂಢವಾದ ಮಹತ್ವವನ್ನು ಕೊಡುವುದೂ ಸಹಜವಾಗಿದೆ. ಹೀಗೆ ಹರೆಯದ ಅದ್ವಿತೀಯಾನಂದವನ್ನು ಕೊಡುವ ರತಿಕಾಮರೂ, ಸ್ತ್ರೀಪುರುಷ ಜನನೇಂದ್ರಿಯಗಳೂ, ರಜೋವೀರ್ಯಗಳೂ ಅನಾಗರಿಕರ ಪೂಜೆಗೆ ಪಾತ್ರವಾದವು.

ಆದ್ದರಿಂದ ಹಸ್ತಪ್ರಯೋಗದ ವಿಷಯಕ್ಕೆ ಪಾರಂಪರಿಕರು ಕಟ್ಟುವ ಕಲ್ಪನೆಗಳ ಮೂಲದಲ್ಲಿ ರಜೋವೀರ್ಯಗಳಿಗೆ ಮತ್ತು ಜನನೇಂದ್ರಿಯಗಳಿಗೆ ಹಿಂದಕ್ಕೆ ಸಲ್ಲಿಸುತ್ತಿದ್ದ ಪೂಜೆ-ಪುರಸ್ಕಾರಗಳಿವೆ. ಪುರುಷನ ವೀರ್ಯದಲ್ಲಿಯೂ ಸ್ತ್ರೀಯ ರಜಸ್ಸಿನಲ್ಲಿಯೂ ಅದ್ಭುತವಾದ ಗೂಢ ಶಕ್ತಿಗಳಿವೆಯೆಂದು ಅನಾಗರಿಕರು ಭಾವಿಸುತ್ತಿದ್ದರು. ಆ ಕಾರಣದಿಂದಲೆ ಹುಡುಗ ಹುಡುಗಿಯರ ಯೌವನೋದಯದ ಕಾಲದಲ್ಲಿ ವಿವಿಧ ತಾಂತ್ರಿಕೋತ್ಸವಗಳನ್ನು ಅವರು ಜರುಗಿಸುವರು. ಕೆಲಕೆಲವು ಕಾಡುಜನಾಂಗಗಳಲ್ಲಿ ಮುಟ್ಟಾದ ಹೆಂಗಸರನ್ನು ಹೊತ್ತುಕೊಂಡು ಹೊಲದ ಸುತ್ತಲೂ ತಿರುಗಿದರೆ ಬೆಳೆಗೆ ಹತ್ತಿದ ಹುಳಗಳು ನಾಶವಾಗುವುವೆಂಬ ಕಲ್ಪನೆಯಿದೆಯೆಂದು ಪ್ಲಿನಿ ಎಂಬ ಜನಾಂಗಶಾಸ್ತ್ರಜ್ಞನು ಹೇಳಿದ್ದಾನೆ. ಬೆಲ್ಜಿಯಮ್ಮಿನಲ್ಲಿ ಮುಟ್ಟಾದವರು ಮೈಲಿಗೆಯಲ್ಲದಿದ್ದರೂ ಅವರು ಬೆಣ್ಣೆ, ಕಾಯಿಪಲ್ಲೆ, ಮಧುಫಲ (ಗುಡಾಮ್ರ) ಗಳನ್ನು ಮುಟ್ಟಿದರೆ ಅವು ಹಳಸುವವೆಂದು ತಿಳಿಯುತ್ತಾರೆ ಮುಟ್ಟಿನ ರಕ್ತವು ಬಹಳ ಭಯಂಕರವಾದುದರಿಂದ ಕುಮಾರಿಯ ಪ್ರಥಮ ಸಮಾಗಮವನ್ನು ಪರಕೀಯರಿಂದ ಮಾಡಿಸುವ ರೂಢಿಯು ಪ್ರಚುರವಾಗಿತ್ತು. ಕೆಲವು ಕಡೆಗಳಲ್ಲಿ ಹುಡುಗಿಯು ಮದುವೆಗೆ ಬಂದವರೆಲ್ಲರೂ ಅವಳೊಡನೆ ಸಂಭೋಗಿಸಿ ಅವಳ ಇಂದ್ರಿಯದಲ್ಲಿಯ ರಜೋವೀರ್ಯಗಳನ್ನು ಸಂಗ್ರಹಿಸಿ ಸಮಾಜದ ಅರಿಷ್ಟನಿವಾರಣೆಗೆಂದು ಕಾಯ್ದಿಡುವರೆಂದು ಪ್ರೊ ವೆಸ್ಟರ್ ಮಾರ್ಕನು ಬರೆದಿದ್ದಾನೆ. ಕಾಡು ಜನಾಂಗಗಳಲ್ಲಿ ಹಸ್ತಪ್ರಯೋಗವು ಬಾಲ್ಯದಲ್ಲಿ ಪ್ರಚಲಿತವಾಗಿರುವುದರಿಂದ ಆಗ ಸ್ಖಲನವಾಗುವ ವೀರ್ಯದ ಗೂಢಶಕ್ತಿಗಳಿಂದ ಹುಡುಗರಿಗೆ ಅರಿಷ್ಟ ಬಡೆಯುಗಿರಲೆಂದು ಯೌವನೋದಯದ ಕಾಲಕ್ಕೆ ಅವರಿಗೆ ಯಂತ್ರಗಳನ್ನು ಕಟ್ಟುವರು; ಮಂತ್ರಪೂರಿತವಾದ ಕಷಾಯಗಳನ್ನು ಕುಡಿಸುವರು; ಅವನ ಮುಂದಿನ ಹಲ್ಲುಗಳನ್ನು ಕಟ್ಟಿಗೆಯ ಒನಕೆಗಳಿಂದ ಗುದ್ದಿ ಮುರಿಯುವರು. ಆಗ ಅವನು ತರುಣಿಯರ ಕಣ್ಣಿಗೆ ಬೀಳಬಾರದಂತೆ. ಮುರೆ, ಓವೆನ್ಸ್

ಮತ್ತು ಗ್ರೌಂಬರ್ನ ಜನಾಂಗಗಳಲ್ಲಿ ಆ ವಿಧಿಗಳು ನಡೆಯುತ್ತವೆಂದು ಓದಿದ್ದು ನಮಗೆ ನೆನಪಿದೆ ಮುಖ್ಯವಾಗಿ ರಜಸ್ಸು ಮತ್ತು ವೀರ್ಯಕ್ಕಿರುವ ಮಹತ್ವವೆ ಕಲ್ಪಿತ ಗೂಢಗುಣವೆ, ಆ ಉತ್ಸವ, ತಂತ್ರಗಳಿಗೆ ಕಾರಣವೆಂದು ತೋರುತ್ತದೆ

ಮೇಲಿನ ಪರಂಪರೆಗಳು ವಿವಿಧ ರೂಪಗಳಲ್ಲಿ ಕೊಂಚ ವ್ಯತ್ಯಸ್ತವಾಗಿ ನಾಗರಿಕ ಜನಾಂಗಗಳಲ್ಲಿಯೂ ಕಂಡುಬರುವವು ಕ್ರಮೇಣ ವೀರ್ಯ-ರಜಸ್ಸುಗಳೆ ಸಂತಾನೋತ್ಪತ್ತಿಗೆ ಕಾರಣವೆಂದು ಮನುಷ್ಯನು ತಿಳಿದುಕೊಂಡನು. ಈ ತಿಳುವಳಿಕೆಯುಂಟಾದ ಮೇಲೆ ವೀರ್ಯ-ರಜಸ್ಸುಗಳಿಗೆ ಇನ್ನೂ ಹೆಚ್ಚಿನ ಮಹತ್ವ ಬಂತು. ಅದರ ಸಂಗಡವೆ ಹಸ್ತಪ್ರಯೋಗದ ದುಷ್ಪರಿಣಾಮಗಳ ಧಾರ್ಮಿಕ ವರ್ಣನೆಗೂ ಕಳೆಯೇರಿತು ಹಸ್ತಪ್ರಯೋಗದಿಂದ ತರುಣರಿಗೆ ವೀರ್ಯವು ಸ್ಖಲಿಸುವಂತೆ ತರುಣಿಯರಿಗೂ ಸೂಕ್ಷ್ಮವಾದ ವೀರ್ಯವು ಸ್ಖಲಿಸುವುದೆಂದು ಅವರು ಭಾವಿಸಿದ್ದರು. ರಜೋವೀರ್ಯಗಳಲ್ಲಿ ಸಂತಾನಗಳು ಬೀಜರೂಪದಲ್ಲಿರುವುದರಿಂದ ಸಂಭೋಗವು ಕೂಡ ಜೀವಹತ್ಯೆಯಷ್ಟೆ ಪಾಪವೆನಿಸಹತ್ತಿತು. ದೇವರ ಆಜ್ಞೆಯನ್ನು ಪಾಲಿಸುವುದಕ್ಕಾಗಿ ಮಕ್ಕಳನ್ನು ಹುಟ್ಟಿಸುವ ಉದ್ದೇಶದಿಂದ ವೀರ್ಯವನ್ನು ಸ್ಖಲಿಸುವುದು ಒಂದು ವೇಳೆ ಕ್ಷಮ್ಯವಾಗಬಹುದು. ಆದರೆ ಹಸ್ತಪ್ರಯೋಗದಿಂದ ಭೂಮಿಯ ಮೇಲೆ ವೀರ್ಯಪತನ ಮಾಡಿಕೊಂಡು ಅದರಲ್ಲಿಯ ಜೀವಿಗಳನ್ನು ಕೊಲ್ಲುವುದೆಂದರೆ ಮಹಾಪಾತಕವೆಂದು ಧಾರ್ಮಿಕರೂ ಪಾರಂಪರಿಕರೂ ಏಕಕಂಠದಿಂದ ಗರ್ಜಿಸಹತ್ತಿದರು.

ಬೇರೆ ಜೀವನನ್ನು ಹುಟ್ಟಿಸುವ ಗುಣವಿದ್ದುದರಿಂದ ರಜೋವೀರ್ಯಗಳೆಂದರೆ ಮನುಷ್ಯರಕ್ತದ ಸಾರವೆ ಆಗಿರಬೇಕೆಂದು ವೈದ್ಯರೂ ಬೆದರಿಸಿದರು. ಅಲ್ಲಿಂದ ಮುಂದೆ ಬಹುತರವಾಗಿ ವೈದ್ಯರ **ಮಾತೇ** ಪಾರಂಪರಿಕ ದೃಷ್ಟಿಯ ಚುಕ್ಕಾಣಿಯಾಯಿತು. ಸಾರ್ವಜನಿಕರ ಅಜ್ಞಾನದ ಲಾಭವನ್ನು ವೈದ್ಯರು ಎಲ್ಲ ದೇಶಗಳಲ್ಲಿಯೂ ತೆಗೆದುಕೊಳ್ಳುತ್ತ ಬಂದಿದ್ದಾರೆ. ಅದರಲ್ಲಿಯೂ ಕಾಮಜೀವನಕ್ಕೆ ಸಂಬಂಧಿಸಿದ ವಿಷಯಗಳು **ಪ್ರತಿ**ಯೊಬ್ಬ ವ್ಯಕ್ತಿಯಲ್ಲಿಯೂ ವಿಲಕ್ಷಣ ವಿಚಾರಗಳನ್ನು ಹುಟ್ಟಿಸು**ವುವಾದುದರಿಂದ** ವೈದ್ಯರು ವೀರ್ಯದ ವಿಷಯದಲ್ಲಿಯೂ ಬಹು ವಿಲಕ್ಷಣವಾದ **ಸಿದ್ಧಾಂತಗಳನ್ನು** ಸಾರಹತ್ತಿದರು. ಆ ಸಿದ್ಧಾಂತಗಳಲ್ಲಿ ಪ್ರತ್ಯಕ್ಷ ಅನುಭವಜನ್ಯ ಜ್ಞಾನಕ್ಕಿಂತ ಕಲ್ಪನಾಚಾತುರ್ಯವೆ ವಿಶೇಷವಾಗಿರುತ್ತಿತ್ತು. ಹಸ್ತಪ್ರಯೋಗದ ಪರಿಣಾಮವನ್ನು

ವರ್ಣಿಸುವಾಗ ವೈದ್ಯರು ರಜೋವೀರ್ಯಗಳೆಂದರೆ ಜೀವನದ ಸತ್ವಸಾರವೆಂದೇ ಭಾವನೆಯನ್ನು ಇಟ್ಟುಕೊಂಡಿದ್ದರು. ಒಂದುಸುರಿನಲ್ಲಿ ಹಸ್ತಪ್ರಯೋಗದಿಂದ ವೀರ್ಯವನ್ನು ಸ್ಖಲಿಸುವುದರಿಂದ ಉಂಟಾಗುವ ಘೋರ, ಭಯಂಕರ ಪರಿಣಾಮಗಳನ್ನು ವರ್ಣಿಸುವ ವೈದ್ಯರೇ ಇನ್ನೊಂದುಸುರಿನಲ್ಲಿ ದಿನಕ್ಕೆ ನೂರಾರು ಸಲ ಸಂಭೋಗಿಸಿದರೂ ಕಸುವುಗುಂದದಂತಹ ವಾಜೀಕರಣ, ವೀರ್ಯಸ್ತಂಭಕ ಮಹೌಷಧಿಗಳು ತಮ್ಮಲ್ಲಿವೆ ಎಂದೂ ಹೇಳಿಕೊಳ್ಳುತ್ತಿದ್ದರು. ಆದ್ದರಿಂದ ಅವರ ಜ್ಞಾನವೆಲ್ಲ ಧನೋಪಾರ್ಜನೆಯ ಸಾಧನವಾಗಿತ್ತಲ್ಲದೆ ಜೀವನದ ಸಮಸ್ಯೆಗಳನ್ನು ಬಿಡಿಸುವ ಬೀಗದ ಕೈಯಾಗಿರಲಿಲ್ಲ. ಈ ಸಂಗತಿಯನ್ನು ನೆನಪಿನಲ್ಲಿಟ್ಟುಕೊಂಡು ಹಸ್ತಪ್ರಯೋಗದ ವಿಷಯಕ್ಕೆ ವಿವಿಧ ದೇಶಗಳ ವೈದ್ಯರು ಪಟ್ಟ ಈ ಕೆಳಗಿನ ಅಭಿಪ್ರಾಯಗಳನ್ನು ಓದಬೇಕು. ಮೇಲೆ ಹೇಳಿದಂತೆ ಈ ಅಭಿಪ್ರಾಯಗಳಲ್ಲಿ ವಿಜ್ಞಾನಕ್ಕಿಂತ ಪಾರಂಪರಿಕ ಕಲ್ಪನೆಗಳೆ ಹೆಚ್ಚಾಗಿ ಎದ್ದು ಕಾಣುವವು.

ಅರವತ್ತು ಹನಿ ರಕ್ತದಿಂದ ಒಂದು ಹನಿ ವೀರ್ಯವಾಗುವುದೆಂಬುದೊಂದು ಪಾರಂಪರಿಕ ಅಭಿಪ್ರಾಯ. ಒಂದು ಸಲದ ಹಸ್ತಪ್ರಯೋಗದಿಂದ ಸುಮಾರು ಎರಡು ಚಮಚೆಯಷ್ಟು ವೀರ್ಯವು ಸ್ಖಲಿಸುವುದು. ಆದ್ದರಿಂದ ಪ್ರತಿಸಲದ ಮುಷ್ಟಿಮೈಥುನದಿಂದ ಒಬ್ಬ ಮನುಷ್ಯನು ೧೨೦ ಚಮಚೆಗಳಷ್ಟು ರಕ್ತವನ್ನು ನಾಶಮಾಡಿದಂತಾಯಿತು. ರಕ್ತವು ಜೀವನದ ಸಾರವೆಂದ ಮೇಲೆ ದಿನಾಲು ಮುಷ್ಟಿಮೈಥುನವನ್ನು ಒಂದು ಸಲ ಇಲ್ಲವೆ ಹಲವು ಸಲ ಮಾಡಿಕೊಂಡರೆ ಅಪರಿಮಿತವಾದ ರಕ್ತವು ನಾಶವಾಗಿ ಭಯಂಕರ ರೋಗಗಳಾಗಬಹುದು. ಅಕಾಲ ಮೃತ್ಯು ಕೂಡ ಬರಬಹುದು ಎಂದು ಆ ಪಾರಂಪರಿಕರ ಸಿದ್ಧಾಂತವಾಗಿದೆ. ಆದರೆ ಹೆಂಗಸರಿಗೆ ಮತ್ತು ಹದಿಮೂರು ವರುಷಕ್ಕಿಂತ ಚಿಕ್ಕ ಹುಡುಗ ಹುಡುಗಿಯರಿಗೆ ಹಸ್ತಪ್ರಯೋಗದಲ್ಲಿ ವೀರ್ಯಸ್ಖಲನವಾಗುವುದಿಲ್ಲ. ಆದ್ದರಿಂದ ಪಾರಂಪರಿಕ ಅಭಿಪ್ರಾಯದಂತೆ ರಕ್ತನಾಶದ ಭಯವೂ ಇಲ್ಲ. ಹಾಗಾದರೆ ಹೆಂಗಸರೂ ಚಿಕ್ಕ ಹುಡುಗ ಹುಡುಗಿಯರೂ ಮುಷ್ಟಿಮೈಥುನ ಮಾಡಿಕೊಳ್ಳಬಹುದೆಂದು ಅವರು ಅನ್ನುವರೋ?

ವೀರ್ಯವೆಂದರೆ ಮಿದುಳು ಮತ್ತು ನರಮಂಡಲಕ್ಕೆ ಪೋಷಣೆಯನ್ನು ಕೊಡುವ ಅಮೃತವಾಗಿದೆ. ಆದ್ದರಿಂದ ಮುಷ್ಟಿಮೈಥುನದಿಂದ ವೀರ್ಯನಾಶ

ಮಾಡಿಕೊಂಡರೆ ಮಿದುಳು ಕೆಟ್ಟು ಹುಚ್ಚು ಹಿಡಿಯಬಹುದು; ಸ್ಮರಣಶಕ್ತಿ ಕಡಿಮೆಯಾಗಬಹುದು; ನರಮಂಡಲದ ಕಸುವು ಕುಗ್ಗಿ ನಡುಕ ಬೇನೆಯು ಉಂಟಾಗಬಹುದು ಎಂದು ಇನ್ನು ಕೆಲವರು ಹೇಳುತ್ತಾರೆ. ಆದರೆ ಈವರೆಗೆ ಜಗತ್ತಿನಲ್ಲಿ ತಮ್ಮ ಜ್ಞಾನ ಮತ್ತು ಕರ್ತೃತ್ವಶಕ್ತಿಗಳಿಂದ ಮೇಧಾವಿಗಳೂ, ಕವಿಗಳೂ, ಕಲಾವಿದರೂ ಎಂದು ಪ್ರಸಿದ್ಧಿ ಹೊಂದಿದವರಲ್ಲಿ ಅನೇಕರು ತಾವು ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತಿದ್ದುದನ್ನು ವಿಜ್ಞಾನಿಗಳೆದುರಿನಲ್ಲಿ ಒಪ್ಪಿದ್ದಾರೆ. ಅವರಲ್ಲಿ ಕೆಲವರು ಮಹಾತ್ಮರೂ ಸಾಧುಗಳೂ ಎಂದು ಹೆಸರು ಪಡೆದವರಿದ್ದಾರೆ. ವಿಯೆನ್ನದ ಸುಪ್ರಸಿದ್ಧ ಮನೋವಿಜ್ಞಾನಿಯಾದ ವಿಲ್‌ಹೆಲ್ಮ್ ಸ್ಟೀಕೆಲ್‌ನು ತಾನು ಮಾಡಿಕೊಂಡ ಅಸಂಯುತ ಹಸ್ತಕ್ರಿಯೆಯ ವಿಷಯವನ್ನು ತನ್ನ ಪುಸ್ತಕದಲ್ಲಿ ವರ್ಣಿಸಿಕೊಂಡಿದ್ದಾನೆ ಆ ವಿಷಯವನ್ನು ಚಿಕಿತ್ಸೆಯ ಅಧ್ಯಾಯದಲ್ಲಿ ಕೊಡುವೆವು ಪೌರ್ವಾತ್ಯ ಮತ್ತು ಪಾಶ್ಚಾತ್ಯ ಕವಿಗಳಲ್ಲಿ ಹಲವರು ಮುಹಾಕಾಮುಲಂಪಟರಾಗಿದ್ದುದು ವಾಚಕರಿಗೆ ಗೊತ್ತುಂಟು. ವೀರ್ಯನಾಶದಿಂದ ಅವರ ಮಿದುಳಿಗೆ ಅಥವಾ ನರಮಂಡಲಕ್ಕೆ ಏಕೆ ಬಾಧೆಯಾಗಲಿಲ್ಲ? ಅಲ್ಲದೆ ಹಿಂದೆ ಹೇಳಿದಂತೆ ಹೆಂಗಸರಿಗೆ ಮತ್ತು ಚಿಕ್ಕ ಹುಡುಗ ಹುಡುಗಿಯರಿಗೆ ವೀರ್ಯಸ್ಖಲನವಾಗದಿದ್ದರಿಂದ ಅವರು ಹಸ್ತಪ್ರಯೋಗವನ್ನು ಮಾಡಿಕೊಂಡರೆ ಅವರ ನರಮಂಡಲ ಮತ್ತು ಮಿದುಳಿಗೆ ಅಪಾಯವಿಲ್ಲವಷ್ಟೆ? ನರಮಂಡಲ ಮತ್ತು ಮಿದುಳು ಕೆಟ್ಟು ಹುಚ್ಚು ಹಿಡಿಯುವುದೆಂದು ಉಪದೇಶ ಮಾಡುವ ಈ ಪಾರಂಪರಿಕರೂ ಮುಷ್ಟಿಮೈಥುನವನ್ನು ಮಾಡಿಕೊಂಡಿರಲೇಬೇಕು. ಏಕೆಂದರ ನೂರಕ್ಕೆ ನೂರು ಮಂದಿಯೂ ಮುಷ್ಟಿಮೈಥುನವನ್ನು ಯಾವುದಾದರೊಂದು ಕಾಲಕ್ಕೆ ಮಾಡಿಕೊಂಡೇ ಇರುತ್ತಾರೆ ಎಂದು ಅನೇಕ ತಜ್ಞರು ಹೇಳುತ್ತಾರೆ. ಹಾಗಾದರೆ ಈ ಉಪದೇಶಕರ ಮಿದುಳು ಏಕೆ ಕೆಡಲಿಲ್ಲ?

ಮುಷ್ಟಿಮೈಥುನದ ಪರಿಣಾಮವೇನಾಗುವುದೆಂಬ ಪ್ರಶ್ನೆಗೆ ಪಾರಂಪರಿಕರು ಕೊಡುವ ಉತ್ತರದಲ್ಲಿ ಜಗತ್ತಿನ ಎಲ್ಲ ರೋಗಗಳೂ ಸಮಾವಿಷ್ಟವಾಗಿರುತ್ತವೆ. ಉದಾಹರಣಾರ್ಥವಾಗಿ ಕೆಲವು ಲಕ್ಷಣಗಳನ್ನು ಇಲ್ಲಿ ಕೊಡುತ್ತೇವೆ. ಚಂಚಲದೃಷ್ಟಿ, ವಿಶೇಷವಾದ ನಾಚಿಕೆ, ಪುಕ್ಕತನ, ಮುಖದಲ್ಲಿ ಓಜೋಹೀನತೆ, ಕಂಣಿನ ಸುತ್ತಲು ಕಪ್ಪುಕಲೆಗಳು, ಗಲ್ಲ (ಕೆನ್ನೆ) ಗಳು ಒಳಸೇರುವುದು, ಸೊರಗುವುದು, ಗಾಬರಿ, ನಿರುತ್ಸಾಹ, ತಂಪು ತಡೆಯದಾ

ಗುವುದು, ಅನಿಶ್ಚಿತ ವರ್ತನ, ಅಸ್ಥಿರ ಚಿತ್ತ, ಉಬ್ಬಸ, ಏಕಾಂತಪ್ರಿಯತ್ವ (ಲೋಕಾಂತದ ಭಯ), ಮೂತ್ರದ ತಡೆತೊಂದರೆಗಳು, ಶ್ವಾಸಗಳು, ಅತಿಯಾಗಿ ಬೆವರುವುದು, ವಿಶೇಷವಾಗಿ ಅಂಗೈ ಅಂಗಾಲು ಬೆವರುವುದು, ಕಂಣು ಗುಡ್ಡೆ ಕೆಂಪಾಗುವುದು, ಬುದ್ಧಿ ಮಾಂದ್ಯ, ಕರುಳಿನ ದೋಷಗಳು, ಮಲಬದ್ಧತೆ, ಮೂಲವ್ಯಾಧಿ, ಅಗ್ನಿಮಾಂದ್ಯ ಮುಂತಾಗಿ ಅನಂತವಾದ ಲಕ್ಷಣಗಳನ್ನು ಹೇಳಬಹುದು ಹೇಳುವವರಿಗೆ ಇನ್ನೂ ಅವಕಾಶವನ್ನು ಕೊಟ್ಟರೆ ಇನ್ನೂ ಭಯಂಕರವಾದ ಪರಿಣಾಮಗಳನ್ನು ವರ್ಣಿಸಬಹುದು ಅರ್ಧಾಂಗವಾಯು, ಕ್ಷಯ, ಕುಷ್ಠ, ನಪುಂಸಕತೆ, ಅಪಸ್ಮಾರ, ಹುಚ್ಚು ಮುಂತಾದ ರೋಗಗಳು ಮುಷ್ಟಿಮೈಥುನಿಗಳಿಗಾಗುವವಲ್ಲದೆ ಅವರ ಆ ಮರಭ್ಯಾಸಗಳಿಂದ ಅವರ ಸಂತಾನಕ್ಕೂ ಆ ರೋಗಗಳಂಟಿಕೊಳ್ಳುತ್ತವೆ ಎಂದು ಕೂಡ ಆ ಪಂಡಿತರು ಹೇಳುವರು

ಮುಷ್ಟಿಮೈಥುನದ ದುಷ್ಪರಿಣಾಮಗಳನ್ನು ಇಷ್ಟು ಭಯಂಕರವಾಗಿ ವರ್ಣಿಸುವವರು ಬರಿ ಸಾಮಾನ್ಯ ಜನರಾಗಿದ್ದರೆ ಅದಕ್ಕೆ ಅಷ್ಟು ಮಹತ್ವ ಬರುತ್ತಿರಲಿಲ್ಲ. ಆದರೆ ಸಾಮಾನ್ಯ ಜನತೆಗೆ ಈ ವಿಷಯದಲ್ಲಿ ದಾರಿತೋರಬೇಕಾಗಿದ್ದ ಡಾಕ್ಟರ, ವೈದ್ಯ, ಹಕೀಮರೇ ಇಂತಹ ವರ್ಣನೆಗಳನ್ನು ಮಾಡಹತ್ತಿದ ಮೇಲೆ ಅವರ ಮಾತಿನ ಪರಿಣಾಮವು ಎಷ್ಟು ಭೀಕರವಾಗಿರಬೇಕು! ಪಾಶ್ಚಾತ್ಯ ದೇಶಗಳಲ್ಲಿ ಕಳೆದ ಶತಮಾನದಿಂದ ಈ ವಿಷಯದಲ್ಲಿ ಕೊಂಚ ಹೊಸ ದೃಷ್ಟಿಯುಂಟಾಗಿದೆ ಆದರೂ ಪಾರಂಪರಿಕ ಭೂತವು ಅವರನ್ನೂ ಬಿಟ್ಟಿಲ್ಲವೆನ್ನಬಹುದು ಪ್ರೊ ಗಾರ್ನಿಯರನು ಹಿಂದಿನ ಕ್ಷುಲ್ಲಕ ವಿಚಾರಗಳನ್ನು ತ್ಯಜಿಸಿ ಸಹಾನುಭೂತಿಯಿಂದ ಮುಷ್ಟಿಮೈಥುನದ ವಿಷಯದ ಗಹನವಾದ ಸಂಶೋಧನವನ್ನು ನಡೆಸಿದನು ಅಂಥ ವಿಜ್ಞಾನಿಯು ಕೂಡ ಹಸ್ತಪ್ರಯೋಗದ ಪರಿಣಾಮವನ್ನು ವರ್ಣಿಸುವಾಗ ಪಾರಂಪರಿಕತೆಯಲ್ಲಿ ಜಾರಿದುದು ವ್ಯಕ್ತವಾಗುತ್ತದೆ. ಅವನೆನ್ನುತ್ತಾನೆ:— ಸ್ವರತಿಯನ್ನಾಚರಿಸಿದರೆ ಬೆನ್ನುಹುರಿಯಲ್ಲಿಯ ಮೇದಸ್ಸು ಕೆರಳುತ್ತದೆ, ಕಾಲುಗಳಿಗೆ ವಾಯು ಬಡಕೊಳ್ಳುವದು, ಲಿಂಗ ಮಣಿಯ ಸಂವೇದನೆಯು ಕುಗ್ಗುವದು. ಸ್ತನಗಳು, ಅಂಡಗಳು, ಗಂಟಲು, ಮೂಗುಗಳಲ್ಲಿಯ ಸಂವೇದನೆ (ಸ್ಪರ್ಶಜ್ಞಾನ) ಯೂ ಕುಗ್ಗುವದು, ಇಂದ್ರಿಯವು ಡೊಂಕಾಗಿ ಸಂಭೋಗದಲ್ಲಿ ಬಲಹೀನವಾಗುವದು, ಸ್ವರತರಿಗೆ ದೇಹ ಮನಸ್ಸುಗಳ ಅಸ್ವಾಸ್ಥ್ಯದಿಂದ ನೈಸರ್ಗಿಕ

ಸಂಭೋಗವು ಸಾಧ್ಯವಾಗದೆ ಅವರು ಮುಖಮೈಥುನ ಮುಂತಾದ ಅನೈಸರ್ಗಿಕ ಸಂಭೋಗಗಳನ್ನು ಅಪೇಕ್ಷಿಸುವವರಾಗುತ್ತಾರೆ. ಮಂಕುತನ, ನಿರುತ್ಸಾಹಗಳಿಂದ ಹೆಂಣುವೃತ್ತಿಯುವರಾಗುವರು. ಸಂಭೋಗಕ್ಕೆ ಅಗತ್ಯವಾದಷ್ಟು ಲಿಂಗೋದ್ರೇಕವು ಅವರಿಗಾಗುವದಿಲ್ಲ. ಸ್ವರತಿಯ ಸಮಯದಲ್ಲಿ ಸ್ವಪ್ನಲೋಕದಲ್ಲಿ ಚಿತ್ರಿಸಿಕೊಂಡು ರಮಿಸಿದಂತಹ ಅತ್ಯಂತ ಮೋಹಕಳಾದ ಸುಂದರಿಯು ಸಿಕ್ಕರೆ ಮಾತ್ರ ಅವರಿಗೆ ಉದ್ರೇಕವಾಗುವದು ಅದು ನಿಜ-ಪ್ರಪಂಚದಲ್ಲಿ ಸಾಧ್ಯವಿಲ್ಲ. ಸ್ವರತಿಯ ಅಭ್ಯಾಸದಿಂದ ಅವರಲ್ಲಿ ಪ್ರತಿಲಿಂಗಿಯ ಆಕರ್ಷಣವೂ ಕಡಿಮೆಯಾಗುವದು. ಕ್ರಮೇಣ ಅವರಲ್ಲಿಯ ಕಾಮಾಗ್ನಿಯೆ ಆರಿಹೋಗುವದು.

ಅಂತೂ ೧೯ನೆಯ ಶತಮಾನದ ಮಧ್ಯಭಾಗದ ವರೆಗೆ ಹಸ್ತಪ್ರಯೋಗಿಗಳಿಗೊಂದು ಗಾಢಾಂಧಕಾರಮಯವಾದ ಭೀಕರ ಯುಗವಾಯ್ತು. ಧಾರ್ಮಿಕರು ಹಸ್ತಪ್ರಯೋಗವನ್ನು ಪಾಪವೆಂದು ಕರೆದು ಅದನ್ನು ಮಾಡಿಕೊಂಡವರು ರೌರವ ನರಕಕ್ಕೆ ಹೋಗುವರೆಂದು ಅಂಜಿಸಿದರು. ಪಾರಂಪರಿಕರು ವೀರ್ಯವೇ ಜೀವನ; ಆದ್ದರಿಂದ ಹಸ್ತಪ್ರಯೋಗವೆಂದರೆ ಸಾವಿಗೆ ಆಮಂತ್ರಣವೆಂದು ಬೆದರಿಸಿದರು. ವೈದ್ಯರು ಹಸ್ತಪ್ರಯೋಗದಿಂದ ನೆಗಡಿ ಮೊದಲ್ಗೊಂಡು ಕ್ಷಯಾಪಸ್ಮಾರ ಮುಂತಾದ ಸಕಲ ರೋಗಗಳೂ ಉಂಟಾಗುವವೆಂದರು. ತಂದೆ ತಾಯಿಗಳು ಹಸ್ತಪ್ರಯೋಗಿಗಳಾದ ಮಕ್ಕಳನ್ನು ರಾಕ್ಷಸೀ ಕ್ರೂರತನದಿಂದ ಶಿಕ್ಷಿಸಿದರು. ಪೂರ್ಣ ಪೌರುಷಶಾಲಿಗಳಾದ ತರುಣರು ಕೂಡ ಸ್ವರತಿಯಿಂದ ನಪುಂಸಕರಾಗಿರುವೆವೆಂಬ ಭ್ರಮೆಯಿಂದ ಮದುವೆ ಗಂಜಿ ಬೈರಾಗಿಗಳಾದರು; ಮದುವೆಯಾದವರು ಹಿಂದಿನ ಸ್ವರತಿಯನ್ನು ನೆನಸಿ ಗಾಬರಿಯಿಂದ ನಪುಂಸಕರಾದರು; ಹೆಂಡತಿಯು ಕಾಮತೃಪ್ತಿಗೆ ಪರಪುರುಷನನ್ನು ಆಶ್ರಯಿಸುವಳೆಂದು ಅಂಜಿ ಹುಚ್ಚರಾದರು. ಒಟ್ಟಿನಲ್ಲಿ ಹಸ್ತಪ್ರಯೋಗಿಗಳಿಗೆ ಜೀವನವು ಮರಣಪ್ರಾಯವಾಯಿತು. ಹಗಲಿರುಳೂ ತಮ್ಮ ಪಾಪಕೃತ್ಯದ ದುಷ್ಪರಿಣಾಮಗಳು ಕರಾಳರೂಪದಿಂದ ತಮ್ಮನ್ನು ನುಂಗಬರುತ್ತಿವೆಯೆಂದು ಬೆಚ್ಚಿ ಬೀಳುತ್ತಿದ್ದರು. ಹಲವು ಸಲ ಮುಷ್ಟಿಮೈಥುನವನ್ನು ಮಾಡಿಕೊಂಡು ಜೀವನಾಧಾರವಾದ ವೀರ್ಯವನ್ನು ಸೂರೆಗೈದು ಇನ್ನು ಜೀವಂತ ಹೆಣವಾಗಿರುವುದಕ್ಕಿಂತ ಆತ್ಮಹತ್ಯೆಯೆ ಒಳಿತೆಂದು ಕೆಲವರು

ನಿರ್ಧರಿಸಿದರು. ತರುಣ ತರುಣಿಯರು ತಮ್ಮ ಜೀವನದ ಅಮೌಲ್ಯ ಉತ್ಸಾಹ, ಶಕ್ತಿಗಳಿಂದ ತುಂಬಿ ತುಳುಕಾಡುವ ಸಮಯದಲ್ಲಿಯೆ ಹಸ್ತ ಪ್ರಯೋಗದ ಭೂತ ಬಡೆದುಕೊಂಡು ಹೆಂಡ ಕುಡಿದವರಂತೆ ದಿಕ್ಕುತಪ್ಪಿದ ಬಾಳನ್ನು ಹಾಗೂ ಹೀಗೂ ಎಳೆಯುತ್ತ ನಡೆದರು. ನಾಲದ್ದಕ್ಕೆ “ಕಳೆದು ಕೊಂಡ ವೀರ್ಯ ಪುನಃ ಸಂಪಾದಿಸಿರಿ; ನಮ್ಮ ಲೇಹ್ಯವನ್ನು ತಿಂದು ಅಮರ ವೀರ್ಯರಾಗಿರಿ; ಈ ದಿವ್ಯ ಹಿಮಾಲಯದ ವನಸ್ಪತಿಯನ್ನು ಸೇವಿಸಿ ಪುನಃ ಗಂಡಸಾಗಿ ಅಸಂಖ್ಯ ಸ್ತ್ರೀಯರನ್ನು ಭೋಗಿಸಿರಿ; ಒಂದೆ ದಿನದಲ್ಲಿ ವೀರ್ಯ ಸಾಗರ ಪಡೆಯಿರಿ' ಮುಂತಾಗಿ ವಿವಿಧ ಔಷಧಗಳ ಮನಮೋಹಕ ಜಾಹಿ ರಾತನ್ನೊ, ಬೀದಿಯಲ್ಲಿಯ ವ್ಯಾಖ್ಯಾನವನ್ನೊ ಓದಿ, ಕೇಳಿ, ಮುಳುಗುತ್ತಿರು ವವನು ಹುಲ್ಲು ಕಡ್ಡಿಯ ಆಸರ ಪಡೆಯಲು ಚಡಪಡಿಸುವಂತೆ ಅರೆಹೊಟ್ಟೆ ಯುಂಡು ಉಳಿದುದನ್ನೆಲ್ಲ ಆ ದಿವ್ಯೌಷಧಗಳ ದಾತರಿಗೆ ಬಲಿಕೊಟ್ಟರು. ಡಾಕ್ಟರೂ ವೈದ್ಯರೂ ಹಕೀಮರೂ ರೋಗವು ಯಾವುದೇ ಇರಲಿ ನಾಡಿ ನೋಡಿದ ಕೂಡಲೆ 'ನೀವು ಮಾಡಿಕೊಂಡಿರುವ ಮುಷ್ಟಿಮೈಥುನದ ಪರಿ ಣಾಮವಿದೆಂ'ದರು ಹೀಗೆ ಒಂದೆರಡು ಶತಮಾನಗಳಿಂದ ಹಸ್ತಪ್ರಯೋಗಿ ಗಳ ಬಡಬೊಕ್ಕಸವನ್ನು ಕಂಡಕಂಡವರೆಲ್ಲ ಸುಲಿಗೆ ಮಾಡಿಕೊಂಡರು. ಕೊನೆಗೂ ಗಾಣಿಗರ ಎತ್ತಿನಂತೆ ತಮ್ಮ ಮುಷ್ಟಿಮೈಥುನದ ಭಯಂಕರ ಪ್ರತಿಬಿಂಬದ ಸುತ್ತಲೆ ನಿಟ್ಟುಸಿರಿಡುತ್ತ ತಿರುಗುವುದು ಅವರಿಗೆ ತಪ್ಪಲಿಲ್ಲ. ಮುಷ್ಟಿಮೈಥುನದ ಮಧುರ ಪ್ರೇರಣೆಯನ್ನು ನಿರೋಧಿಸುವುದಾಗಲಿಲ್ಲ.

ಕಳೆದ ಶತಮಾನದ ಕೊನೆಯ ಭಾಗದಲ್ಲಿ ಜೀವನದ ಅನೇಕ ನಿಕಟ ವಿಷಯಗಳ ಬಗ್ಗೆ ಮೇಧಾವಿಗಳು ತಮ್ಮ ಸಂಶೋಧನದ ಪ್ರಕಾಶವನ್ನು ಕೆಡಹಿದರು. ಕಾಮಜೀವನವೂ ವಿಜ್ಞಾನಿಗಳ ಪ್ರಾಮಾಣಿಕವಾದ ಅಭ್ಯಾ ಸಕ್ಕೆ ಗುರಿಯಾಯಿತು ಸ್ವರತಿಯ ವಿಷಯಕ್ಕೆ ಸಮಂಜಸವಾದ ನಿರ್ದಾ ಕ್ಷಿಣ್ಯವಾದ ಅಭಿಪ್ರಾಯಗಳು ಬಯಲಿಗೆ ಬರಹತ್ತಿದವು. ಲೋಕಕಲ್ಯಾ ಣದ ಮುಸುಕಿನಲ್ಲಿ ಅಜ್ಞಾನಿಗಳ ಸಂಪತ್ತನ್ನು ಲೂಟಿಮಾಡಿ ಜೀವನದ ಸುಖ ಶಾಂತಿಗಳನ್ನು ಗಾಳಿಗೆ ತೂರಿಬಿಡುವ ವೈದ್ಯ ಡಾಕ್ಟರ ಹಕೀಮರ ಮೋಸ ಗಾರಿಕೆಗೆ ಕೊಂಚ ತಡೆಯಾಗಹತ್ತಿತು.

---

# ಏಳನೆಯ ಪ್ರಕರಣ

*

## ವೈಜ್ಞಾನಿಕ ದೃಷ್ಟಿ

ಸಾಮಾನ್ಯವಾಗಿ ಹಸ್ತಪ್ರಯೋಗವನ್ನು ದೂಷಿಸುವವರು ಎರಡರ ಲ್ಲೊಂದು ತತ್ವವನ್ನವಲಂಬಿಸಿರುತ್ತಾರೆ. ಒಂದನೆಯದೆಂದರೆ ಕಾಮಕ್ಕೆ ಸಂಬಂಧಿಸಿದುದೆಲ್ಲ ಕುತ್ಸಿತ, ಪಾಪಕರ ಎಂಬುದು. ಅದಕ್ಕೆ ನಮ್ಮ ಸರಳ ಪಾಪ ಉತ್ತರವೆಂದರೆ ದೇವರು (ಅವನು ಕರುಣಾಸಾಗರನಾಗಿದ್ದರೆ) ಕುತ್ಸಿತ, ಪಾಪಗಳಿಗೆ ಪ್ರೇರಕವಾದುದಾವುದನ್ನೂ ಹುಟ್ಟಿಸಿರಲಾರ ಮತ್ತು **ನೈಸರ್ಗಿಕವಾದುದಾವುದೂ ಪಾಪಕರವಲ್ಲ.** ಇಷ್ಟೆ, ನೈಸರ್ಗಿಕ ಕ್ರಿಯೆ ಗಳಿಂದ ವ್ಯಕ್ತಿಗೂ ಸಮಾಜಕ್ಕೂ ಹಾನಿಯಾಗದಿದ್ದರಾಯಿತು ಆದ್ದರಿಂದ ಕಾಮವು ಕುತ್ಸಿತವೆಂಬ ಭಾವನೆಗಿಂತ ಕಾಮವು ಯಾವಾಗ ಹಾನಿಕರ ವಾದೀತು ಎಂದು ವಿವೇಚಿಸುವುದು ಸಮಂಜಸವಾದ ಮಾರ್ಗವಾಗಿವೆ. ಕಾಮದ ಪ್ರವೃತ್ತಿಗಳು ಹಾನಿಕರವಾಗುವ ಸಂಭವಗಳನ್ನು ತಿಳಿದುಕೊಳ್ಳಬೇಕಾದರೆ ವಿಜ್ಞಾನವೆ ನಮ್ಮ ಕೈದೀಪವಾಗಬೇಕು. ಈ ಪ್ರಕರಣದಲ್ಲಿ ವಿಜ್ಞಾನದೃಷ್ಟಿ ಯನ್ನು ಉಪಯೋಗಿಸುವಾ

ಪಾರಂಪರಿಕರ ಮತ್ತೊಂದು ತತ್ವವೆಂದರೆ ವೀರ್ಯವೆಂದರೆ ಜೀವನ. ಸಂತಾನೋತ್ಪತ್ತಿಗಾಗಿ ಸಂಭೋಗಿಸುವುದು ಕೂಡ ಆ ತತ್ವಕ್ಕನುಸರಿಸಿ ಜೀವನ ಘಾತಕವಾದುದು. ಅಂದಮೇಲೆ ಹಸ್ತಪ್ರಯೋಗದಿಂದ ನಿಷ್ಪ್ರ ಯೋಜಕವಾಗಿ ವೀರ್ಯವನ್ನು ಭೂಮಿಗೆರೆಯುವುದು ಮಹಾ ಉತ್ಪಾತ, ಅಧಃಪಾತದ ಕೆಲಸವಾಯಿತು. ಆದರೆ ಹಿಂದಿನ ಅಧ್ಯಾಯದಲ್ಲಿ ವಿವೇಚಿಸಿ ದಂತೆ ಈ ತತ್ವವು ಹುಡುಗ, ಹುಡುಗಿಯರಿಗೂ ಹೆಂಗಸರಿಗೂ ಅನ್ವಯಿಸುವ

ದಿಲ್ಲ ಏಕೆಂದರೆ ಅವರಲ್ಲಿ ಹಸ್ತಪ್ರಯೋಗದಿಂದ ವೀರ್ಯಪತನವಾಗುವ ದಿಲ್ಲ. ಇಷ್ಟರಿಂದಲೆ ಈ ತತ್ವದ ಹುರುಳುಗೇಡಿತನವು ವಾಚಕರಿಗೆ ಮನ ವರಿಕೆಯಾಗಲಾರದು ಆದ್ದರಿಂದ ನಿಜವಾಗಿಯೂ ವೀರ್ಯವೆಂದರೆ ಜೀವ ನವೇ? ವೀರ್ಯಸ್ಖಲನದಿಂದ ಜೀವನದ ನೆಲೆಗಟ್ಟು ಕಸುವುಗುಂದುವುದೆ? ಅಂಥ ಮೋಹಕವಾದ, ಆತ್ಮಘಾತಕ್ಕೆ ದಾರಿದೋರುವ ವೀರ್ಯವನ್ನು ದೇವರು ಪುರುಷರಿಗಷ್ಟೆ ಏಕೆ ಕೊಟ್ಟನು? ಚಿಕ್ಕ ಹುಡುಗ ಹುಡುಗಿಯರೂ ಹೆಂಗಸರೂ ಸ್ವರತಿಯಲ್ಲಿ ಬೇಕಾದ ಹಾಗೆ ಮುಳುಗಲೆಂಬುದು ದೇವರ ಇಚ್ಛೆಯೆ? ಸ್ವರತಿ ಯಿಂದ ಗಂಡಿಗೂ, ಹೆಣ್ಣಿಗೂ ಕಿರಿಯರಿಗೂ ಹಿರಿಯರಿಗೂ ಎಲ್ಲರಿಗೂ ಹಾನಿ ಯಾಗುವದೆಂದಾದರೆ ಮೇಲಿನ ವೀರ್ಯನಾಶದ ತತ್ವವು ತಿಳಿಗೇಡಿತನದ್ದಾ ಗಿರಬಹುದೇ? ಅಥವಾ ಸ್ವರತಿಯಿಂದಾಗುವ ದುಷ್ಪರಿಣಾಮವು ವೀರ್ಯ ಸ್ಖಲನದ ಪರಿಣಾಮವಾಗಿರದೆ ತನುಮನಗಳಲ್ಲಿಯ ಬೇರೆ ಕೆಲವು ಸಂಗತಿ ಗಳ ಪರಿಣಾಮವಾಗಿರಬಹುದೆ? ಹಾಗಿದ್ದರೆ ಆ ಸಂಗತಿಗಳಾವವು? ಎಂಬ ಸಂಶಯಗಳಿಗೆಲ್ಲ ಸಮರ್ಪಕವಾದ ಉತ್ತರ ಬೇಕು. ಮೊದಲು ವೀರ್ಯದ ವಿಷಯವನ್ನು ತೆಗೆದುಕೊಳ್ಳುವಾ.

ವೀರ್ಯದ ತೀರ ಮುಖ್ಯವಾದ ಉದ್ದೇಶವು ಸಂತಾನೋತ್ಪತ್ತಿ ಎಂಬುದು ಎಲ್ಲರಿಗೂ ಗೊತ್ತಿದೆ ಮತ್ತು ಸಂತಾನೋತ್ಪತ್ತಿಗೆ ಪುರುಷನ ವೀರ್ಯದಷ್ಟೆ ಸ್ತ್ರೀಯ ರಜಸ್ಸೂ ಮುಖ್ಯವಾಗಿದೆ ಬರಿ ಪುರುಷನ ವೀರ್ಯ ಮಾತ್ರದಿಂದ ಸಂತಾನ ಹುಟ್ಟದು ಆದ್ದರಿಂದ ಜೀವಶಾಸ್ತ್ರದ ದೃಷ್ಟಿಯಲ್ಲಿ ವೀರ್ಯಕ್ಕಿದ್ದಷ್ಟೆ ಮಹತ್ವವು ರಜಸ್ಸಿಗೂ ಇರಬೇಕು ವೀರ್ಯವು ಜೀವನ ವಾಗಿದ್ದರೆ ರಜಸ್ಸು ಕೂಡ ಜೀವನವಾಗಿರಬೇಕು. ವೀರ್ಯಸ್ಖಲನದಿಂದ ಜೀವನಾಶವಾಗುತ್ತಿದ್ದರೆ ರಜಃಸ್ರಾವದಿಂದಲೂ ಜೀವನಾಶವಾಗಬೇಕು. ಮತ್ತು ಗಂಡಸಿನ ಜೀವನದ ಭದ್ರತೆಗೆ ವೀರ್ಯಸಂಯಮದ ಅಗತ್ಯವಿದ್ದರೆ ಹೆಂಗಸಿನ ಜೀವನರಕ್ಷಣೆಗೆ ರಜಃಸಂಯಮ (ಮುಟ್ಟು ತಡೆಯುವುದು) ಕೂಡ ಅವಶ್ಯ ವಾದೀತು! ಆದರೆ ಯಾವದಾದರೊಂದು ರೋಗದ ಹೊರತು ತರುಣಸ್ತ್ರೀಯ ಮುಟ್ಟು ನಿಲ್ಲುವುದು ಶಕ್ಯವಿಲ್ಲ. ಹಾಗಾದರೆ ಜೀವನ ಭದ್ರತೆಯ ಅನು ಕೂಲವು (ವೀರ್ಯ ಸಂಯಮದ ಯುಕ್ತಿ) ಗಂಡಸಿಗೆ ಮಾತ್ರ ಸಾಧ್ಯವೇ? ಪ್ರಕೃತಿಯಲ್ಲಿ ಈ ಪಕ್ಷಪಾತವಿರುವುದು ಸಾಧ್ಯವೇ? ಅದೇಕೆ ಸ್ತ್ರೀಯು

ಗರ್ಭಿಣಿಯಾಗಿರುವಾಗಲೂ ರಜಃಸ್ರಾವವಾಗುವದಿಲ್ಲ. ಅಂದರೆ ಸ್ತ್ರೀಯ ಜೀವನವು ಸಗರ್ಭಾವಸ್ಥೆಯಲ್ಲಿ ಹೆಚ್ಚು ಭದ್ರವಾಗಿರುವುದೆನ್ನೋಣವೇ? ವಿಶಿಷ್ಟ ವಯಸ್ಸಿನ ನಂತರ ಸ್ತ್ರೀಪುರುಷರಲ್ಲಿ ರಜೋವೀರ್ಯಗಳ ನಿರ್ಮಾಣ ಪ್ರಮಾಣಗಳು ಕಡಿಮೆಯಾಗುತ್ತವೆ. ಹಾಗಾದರೆ ಆ ವಯಸ್ಸಿನಲ್ಲಿ ಅವರಿಗೆ ಜೀವನವೆ ಇಲ್ಲವೆಂದು ತಿಳಿಯಬೇಕೇ? ಶ್ರಮಸಹಸ, ಕರ್ತೃತ್ವಶಕ್ತಿ, ಬುದ್ಧಿಮತ್ತೆಗಳಲ್ಲಿ ತರುಣರ ತಲೆಮೆಟ್ಟಿಹಾರುವ ವೃದ್ಧ ಸ್ತ್ರೀಪುರುಷರಿಲ್ಲವೇ? ಇನ್ನು ಸ್ತ್ರೀಯ ರಜಸ್ಸಿಗೇ 'ವೀರ್ಯ'ವೆನ್ನುತ್ತಿದ್ದರೆ ಅದು ಸಕಾಲದಲ್ಲಿ ಸ್ರವಿಸಿ ಹೋದರೇ ಜೀವನವು ಭದ್ರವೂ ನಿರೋಗಿಯೂ ಆಗಿರಬಲ್ಲದು. ಮುಟ್ಟು ತಡೆಯುವದರಿಂದ ಹಲವು ಭಯಂಕರ ರೋಗಗಳಾಗುವವೆಂಬುದು ಈಗ ಬಹು ಜನರಿಗೆ ತಿಳಿದಿದೆ. 'ವೀರ್ಯವೆ ಜೀವನ' ಎಂಬ ಪುರಾತನ ತತ್ವವನ್ನೆ ಮನ್ನಿಸಬೇಕಾದರೆ ವೀರ್ಯವೆಂದರೆ ಹಿಂದೆ ವಿವರಿಸಿದ ಓಜೋಗ್ರಂಥಿಗಳಿಂದ ಸೂಕ್ಷ್ಮವಾಗಿ ಸ್ರವಿಸುವ 'ಶುಕ್ರ'ವೆಂದು ನಾವು ಅರ್ಥ ಮಾಡಬೇಕಾಗುವದು. ಈ ವಿವೇಚನೆಯನ್ನು ಓದಿ ವಾಚಕರು ಹೊರಗೆ ಸ್ರವಿಸುವ ಪುರುಷ ವೀರ್ಯದ ಮಹತ್ವವನ್ನು ಕೊಂಚ ಕುಗ್ಗಿಸಬಲ್ಲರಾದರೂ ಬಹು ಪುರಾತನ ಕಾಲದಿಂದ ಬಂದಿರುವ ಸ್ಥೂಲ ಪುರುಷ ವೀರ್ಯದ ಭಕ್ತಿಯು ಬೇರು ಇನ್ನೂ ಭದ್ರವಾಗಿಯೆ ಇದೆಯೆನ್ನಬಹುದು ಆದ್ದರಿಂದ ವೀರ್ಯ ಮತ್ತು ರಜೋನಿರ್ಮಾಣಗಳ ಕ್ರಮವನ್ನು ಇಲ್ಲಿ ವರ್ಣಿಸಿ ಪುನಃ ವಾಚಕರ ಕೈಗೇ ತಕ್ಕಡಿಯನ್ನು ಒಪ್ಪಿಸುತ್ತೇವೆ.

## ಪುರುಷವೀರ್ಯ

ವೀರ್ಯವೆಂದರೆ ಒಂದೆ ವಸ್ತುವಲ್ಲ. ಅದರಲ್ಲಿ ಮುಖ್ಯವಾಗಿ ಎರಡು ವಸ್ತುಗಳಿವೆ. (೧) ಬೀಜಾಣುಗಳು ಮತ್ತು (೨) ಅವಕ್ಕೆ ಈಜಾಡಲು ಅನುಕೂಲವಾದ ರಸ. ಬೀಜಾಣುಗಳು ಅಂಡಗಳಲ್ಲಿ ಹುಟ್ಟುತ್ತವೆ. ಅಲ್ಲಿಂದ ಅಂಡದ ಹಿಂಭಾಗದಲ್ಲಿರುವ ಬೀಜಕೋಶಕ್ಕೆ ಬಂದು ಅಲ್ಲಿಯ ಒಂದು ರಸದಲ್ಲಿ ಪರಿಪೂರ್ಣಾವಸ್ಥೆಯನ್ನು ಮುಟ್ಟುತ್ತವೆ. ನಂತರ ವೀರ್ಯನಲಿಕೆಯ ಮೂಲಕ ವೀರ್ಯಕೋಶಕ್ಕೆ ಬಂದು ನೆಲೆಗೊಳ್ಳುತ್ತವೆ. ವೀರ್ಯಕೋಶದಲ್ಲಿಯ ಒಂದು ವಿಧದ ರಸವೂ ಬೀಜಾಣುಗಳ ರಸದಲ್ಲಿ ಬೆರೆಯುತ್ತದೆ. ಮುಂದೆ ಕಾಮೋದ್ರೇಕವಾದಾಗ ಅಥವಾ ಬೇರೆ ಯಾವದಾದರೊಂದು ರೀತಿಯಲ್ಲಿ ಅದು ಹೊರಗೆ

ಸ್ಖಲಿಸಿ ಬರುವಾಗ ಪ್ರಸ್ಥಿತಗ್ರಂಥಿಯ ರಸವೂ ಅದರಲ್ಲಿ ಕಲಿತು ವೀರ್ಯ ವೆಂಬ ಹೆಸರಿನಿಂದ ಲಿಂಗದ ಮೂಲಕ ಹೊರಗೆ ಸ್ರವಿಸುತ್ತದೆ. ಆದ್ದರಿಂದ ವೀರ್ಯವೆಂದರೆ ಬೀಜಾಣು ಮತ್ತು ಬೀಜಕೋಶ, ವೀರ್ಯಕೋಶ, ಪ್ರಸ್ಥಿತ ಗ್ರಂಥಿಗಳ ಸಮ್ಮಿಶ್ರ ರಸಗಳ ಒಂದು ಸಂಯುಕ್ತ ವಸ್ತುವೆಂದಂತಾಯಿತು. ಈ ವೀರ್ಯದ ನಿರ್ಮಾಣವು ಎಂದಾದರೊಮ್ಮೆ ಕಣ್ಣು ಮುಚ್ಚಿ ತೆರೆಯುವು ದರೊಳಗಾಗಿ ಆಗಿಬಿಡುವದಿಲ್ಲ. ಪ್ರತಿದಿನವೂ ಅನೇಕ ಬೀಜಾಣುಗಳು ಪರಿ ಪೂರ್ಣಾವಸ್ಥೆಯನ್ನು ಮುಟ್ಟಿ ವಿವಿಧ ರಸಗಳೊಡನೆ ಕಲಿತು ವೀರ್ಯವೆಂಬ ಹೆಸರಿನಿಂದ ವೀರ್ಯಾಶಯದಲ್ಲಿ ಹಸಿಹನಿಯಾಗಿ ಸಂಗ್ರಹವಾಗುತ್ತಿರುತ್ತದೆ ಮೂತ್ರಾಶಯದ ಹಿಂಭಾಗದಲ್ಲಿ ಎರಡು ವೀರ್ಯಾಶಯಗಳಿರುತ್ತವೆ. ಎ ರಡರಲ್ಲಿಯೂ ಕೂಡಿ ಸುಮಾರು ಎರಡು ಚಮಚೆಯಷ್ಟು ವೀರ್ಯವು ಹಿಡಿ ಸುವದು. ಅವುಗಳಲ್ಲಿ ವೀರ್ಯವು ತುಂಬಿತೆಂದರೆ ಪುರುಷನಿಗೆ ಸ್ವಾಭಾವಿಕ ವಾಗಿ ಕಾಮವಿಕಾರವಾಗುವದು ಆಗ ಅವನು ಸಂಭೋಗದಲ್ಲಾಗಲಿ, ಮುಷ್ಟಿಮೈಥುನ ಮುಂತಾದ ಕೃತ್ರಿಮ ಉದ್ರೇಕಗಳಿಂದಾಗಲಿ ವೀರ್ಯವನ್ನು ಸ್ಖಲಿಸಿಕೊಂಡು ವೀರ್ಯಾಶಯಗಳನ್ನು ಬರಿದು ಮಾಡುವನು. ಅಥವಾ ಪ್ರಕೃತಿಯೆ ಸ್ವಪ್ನಾವಸ್ಥೆಯ ಮೂಲಕ ವೀರ್ಯವನ್ನು ಸ್ಖಲಿಸಿ ವೀರ್ಯಾ ಶಯಗಳನ್ನು ತೆರವು ಮಾಡುವಳು (ಈ ವಿಷಯಗಳನ್ನೆಲ್ಲ ಸವಿಸ್ತರ ವಾಗಿ ಮತ್ತು ಸಚಿತ್ರವಾಗಿ ರಮ್ಯವಾಗಿ 'ಅನಂಗಶಾರೀರ' ಎಂಬ ನನ್ನ ಮುಂದಿನ ಪುಸ್ತಕದಲ್ಲಿ ವಿವೇಚಿಸಲಾಗುವದು.)

## ಸ್ತ್ರೀಯ ರಜಸ್ಸು

ಪುರುಷನ ವೀರ್ಯವು ಹೇಗೆ ಕೆಲವು ವಸ್ತುಗಳ ಮಿಶ್ರಣವಾಗಿದೆಯೋ ಹಾಗೆ ಸ್ತ್ರೀಯ ರಜಸ್ಸು ಕೂಡ ಕೆಲವು ವಸ್ತುಗಳ ಮಿಶ್ರಣವಾಗಿದೆ. ಮುಟ್ಟಾದಾಗ ಅವಳ ಯೋನಿಯಿಂದ ಪ್ರವಹಿಸುವದಕ್ಕೆ ರಜಸ್ಸು ಎನ್ನುತ್ತಾರೆ ಆದರಲ್ಲಿ ಬಹುಪ್ರಮಾಣವು ರಕ್ತವಾಗಿರುತ್ತದೆ ತೀರ ಸ್ವಲ್ಪ ಪ್ರಮಾಣವು ಅವಳ ಡಿಂಭಾಶಯ ಹಾಗೂ ಗರ್ಭಾಶಯದ ಒಳಮೈಯಿಂದ ಸ್ರವಿಸಿದ ವಸ್ತುಗಳಿರುತ್ತವೆ. ಡಿಂಭಾಶಯಗಳಲ್ಲಿ ಅಸಂಖ್ಯ ಅಪರಿಪಕ್ವ ಡಿಂಭಾಣುಗಳಿ ರುತ್ತವೆ. ಅವುಗಳು ೨೮ ದಿನಕ್ಕೊಂದರಂತೆ ಪರಿಪಕ್ವವಾಗಿ ಡಿಂಭನಾಳಗಳ

ಮೂಲಕ ಗರ್ಭಾಶಯಕ್ಕೆ ಬಂದು ಕೆಲವು ದಿನ ನಿಲ್ಲುತ್ತವೆ. ಆಗ ಸಂಭೋಗದ ಮೂಲಕ ಪುರುಷನ ವೀರ್ಯದಲ್ಲಿಯ ಬೀಜಾಣುವು ಅವಳ ಗರ್ಭಾಶಯವನ್ನು ಹೊಕ್ಕು ಆ ಡಿಂಭಾಣುವಿನೊಡನೆ ಬೆರೆತರೆ ಗರ್ಭಧಾರಣೆಯಾದಂತಾಯಿತು. ಹಾಗಾಗದಿದ್ದರೆ ಡಿಂಭಾಣುವು ಗರ್ಭಾಶಯದ ಒಳಪೈಯಲ್ಲಿಯ ಕೊಂಚ ಶ್ಲೇಷ್ಮ ಮತ್ತು ರಕ್ತದೊಡನೆ ಹೊರಬಿದ್ದು ಹೋಗುತ್ತವೆ ಅದಕ್ಕೆ ಮುಟ್ಟಾಗುವಿಕೆ ಎನ್ನುತ್ತೇವೆ. ಮುಟ್ಟು ಸರಾಸರಿ ೨೮ ದಿನಗಳ ಅಂತರದಲ್ಲಿ ಆಗುತ್ತದೆ ಒಂದು ತಿಂಗಳು ಎಡ ಡಿಂಭಾಶಯದಲ್ಲಿಯ ಒಂದು ಅಣುವು ಪಕ್ವವಾಗುತ್ತದೆ, ಒಂದು ತಿಂಗಳು ಬಲ ಡಿಂಭಾಶಯದಲ್ಲಿಯ ಒಂದು ಅಣುವು ಪಕ್ವವಾಗುತ್ತದೆ.

ಹುಡುಗಿಯು ಮೈನೆರೆದ ಮೊದಲುಗೊಂಡು ಅವಳಿಗೆ ಸುಮಾರು ೪೦ ವರ್ಷಗಳಾಗುವವರೆಗೆ ೨೮ ದಿನಕ್ಕೊಮ್ಮೆ ಮುಟ್ಟಾಗುತ್ತಾಳೆ ಹಿಂದೆ ಕೌಮಾರಾವಸ್ಥೆಯ ಪ್ರಾರಂಭದ ವರ್ಣನೆ ಮಾಡುವಾಗ ಹುಡುಗಿಯರಲ್ಲಿ ಶುಕ್ರೋದಯವಾಗಿ ಪ್ರಥಮ ಋತುವಾಗುವ ಮೊದಲು ಅವಳು ಪುರುಷಕಾಮುಳಾಗುವಳು ಎಂದು ಹೇಳಿದುದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅದೇ ವಿಧದ ಪುರುಷ ಕಾಮವು ಅವಳಲ್ಲಿ ಮುಂದೆ ಪ್ರತಿಯೊಂದು ಸಲದ ಮುಟ್ಟಿನಲ್ಲಿಯೂ ವ್ಯಕ್ತವಾಗುತ್ತದೆ.

ಈಗ ರಜೋವೀರ್ಯಗಳ ಪ್ರಭಾವವನ್ನು ಕುರಿತು ತುಸು ಯೋಚಿಸುವ. ವೀರ್ಯವು ದಿನದಿನವೂ ನಿರ್ಮಿತವಾಗಿ ವೀರ್ಯಾಶಯಗಳಲ್ಲಿ ತುಂಬಿಕೊಳ್ಳುತ್ತದೆ ವೀರ್ಯಾಶಯಗಳು ತುಂಬಿಕೊಂಡವೆಂದರೆ ಗಂಡಸಿಗೆ ನೈಸರ್ಗಿಕವಾಗಿ ಕಾಮೋದ್ರೇಕವಾಗುತ್ತದೆ ಆಗ ಅವನು ಸ್ತ್ರೀಕಾಮಿಯಾಗುತ್ತಾನೆ. ಅದರಿಂದ ಅವನು ಯಾವುದಾದರೊಂದು ರೀತಿಯಲ್ಲಿ ವೀರ್ಯಸ್ಖಲನಕ್ಕೆ ಪ್ರವರ್ತಿಸುತ್ತಾನೆ ಸ್ತ್ರೀಯಲ್ಲಿ ಕೂಡ ಡಿಂಭಾಣುವು ಪಕ್ವವಾಗಿ ಗರ್ಭಾಶಯದ ಕಡೆಗೆ ಬರುವಾಗ ಮತ್ತು ಗರ್ಭಾಶಯದಲ್ಲಿ ನಿಂತಾಗ ವಿಶೇಷವಾದ ಕಾಮವಿಕಾರವಾಗುತ್ತದೆಂದು ಸುಪ್ರಸಿದ್ಧ ಕಾಮವಿಜ್ಞಾನಿಗಳ ಅಭಿಪ್ರಾಯವಾಗಿದೆ. ಅಂದರೆ ಪುರುಷರಲ್ಲಿ ವೀರ್ಯಾಶಯಗಳು ತುಂಬಿಕೊಂಡಾಗ ಮತ್ತು ಸ್ತ್ರೀಯಲ್ಲಿ ಡಿಂಭಾಣುವು ಪಕ್ವವಾಗಿ ಗರ್ಭಾಶಯಕ್ಕೆ ಬಂದಾಗ ಪ್ರಕೃತಿಯೆ ಅವರಲ್ಲಿ ಕಾಮೋದ್ರೇಕವನ್ನುಂಟುಮಾಡುವಳು ಹಾಗೆ ಪರಸ್ಪರರನ್ನು ಕಾಮಿಸಿ

ಸಂಭೋಗಿಸಿ ಸಂತಾನೋತ್ಪತ್ತಿಯನ್ನು ಮಾಡಬೇಕೆಂಬುದೆ ಪ್ರಕೃತಿಯ ಧ್ಯೇಯವಾಗಿದೆ

ಈ ವಿವೇಚನೆಯಿಂದ ಒಂದು ಮಾತು ತಿಳಿಯಾಯಿತು **ರಜೋವೀರ್ಯಗಳು ಕೆಲವು ದಿನ ಗರ್ಭಧಾರಣೆಗಾಗಿ ಕಾದಿರಬೇಕು. ಸಕಾಲದಲ್ಲಿ ಗರ್ಭಧಾರಣೆಯಾಗದಿದ್ದರೆ ರಜೋವೀರ್ಯಗಳು ಸ್ಖಲಿಸಿ ದೇಹದಿಂದ ಹೊರಬಿದ್ದು ಹೋಗಬೇಕು.** ಇದು ಪ್ರಕೃತಿಯ ಸನಾತನ ನಿಯಮವಾಗಿದೆ. ಹಸ್ತಪ್ರಯೋಗವನ್ನು ಮಾಡಿಕೊಂಡು ಜೀವನವನ್ನು ಹಾಳುಗೆಡಹಿದೆವೆಂದು ಚಡಪಡಿಸುತ್ತಿರುವವರೂ, ಅವರನ್ನು ಶಪಿಸುವ ಪಾರಂಪರಿಕರೂ ಮೇಲಿನ ಸನಾತನ ನಿಯಮವನ್ನು ಚೆನ್ನಾಗಿ ಅರಿತುಕೊಳ್ಳಬೇಕು. ವೀರ್ಯವನ್ನು ಸಂಭೋಗದಿಂದಾಗಲಿ ಸ್ವರತಿಯಲ್ಲಾಗಲಿ ಸ್ಖಲಿಸಿಕೊಳ್ಳದಿದ್ದರೆ ಅದು ಶರೀರದಲ್ಲಿ ಇಂಗಿಕೊಂಡು ದೇಹಕ್ಕೂ ಬುದ್ಧಿಗೂ ಆರೋಗ್ಯಶಕ್ತಿ ಸೌಂದರ್ಯಗಳನ್ನು ಕೊಡುತ್ತದೆಂಬ ಹಳೆಯ ಸಿದ್ಧಾಂತವು ವಿಜ್ಞಾನಸಮ್ಮತವಾದುದಲ್ಲ. ಏಕೆಂದರೆ ಕಾಮತಂತ್ರದಿಂದ ಪೂರ್ಣವಾಗಿ ನಿವೃತ್ತರಾಗಿದ್ದರೂ ಕೂಡ ಸ್ವಪ್ನಾವಸ್ಥೆಯಾಗಿ ಆ ವೀರ್ಯವು ಹೊರಬಿದ್ದು ಹೋಗುವುದು ನೈಸರ್ಗಿಕ ಕ್ರಮವಾಗಿದೆ. ವೀರ್ಯವು ಪುನಃ ರಕ್ತಗತವಾಗಿ ತುಷ್ಟಿಪುಷ್ಟಿಗಳನ್ನು ಕೊಡುತ್ತದೆಂಬ ಅಭಿಪ್ರಾಯವುಳ್ಳವರು ರಜಸ್ಸು ಕೂಡ ಹಾಗೆಯೆ ಪುನಃ ರಕ್ತಗತವಾಗಿ ಸ್ತ್ರೀಯರ ಆರೋಗ್ಯಭಾಗ್ಯವನ್ನು ಹೆಚ್ಚಿಸುವುದೆಂದು ಒಪ್ಪಿಕೊಳ್ಳಬೇಕಾದೀತು! ಇಲ್ಲದಿದ್ದರೆ ಪ್ರಕೃತಿಯಲ್ಲಿ ಪಕ್ಷಪಾತವನ್ನು ಕಂಡಂತಾಗುವುದು. ಆದರೆ ಈ ಪಾರಂಪರಿಕರ ಅಭಿಪ್ರಾಯದಂತೆ ರಜಸ್ಸು ರಕ್ತಗತವಾದರೆ ಅಥವಾ ಸಕಾಲದಲ್ಲಿ ಸ್ರವಿಸಿ ಹೋಗದಿದ್ದರೆ ತುಷ್ಟಿಪುಷ್ಟಿಗಳಲ್ಲ, ಭಯಂಕರ ರೋಗಗಳುಂಟಾಗುವುವೆಂಬುದು ಎಲ್ಲರಿಗೂ ಗೊತ್ತಿದೆ.

ಏಕೆಂದರೆ ನಮ್ಮ ದೇಹದಲ್ಲಿ ಒಮ್ಮೆ **ವಿಸರ್ಜಿಸಲಿಕ್ಕೆ ಯೋಗ್ಯವಾದ ಯಾವ ಸ್ರಾವವೂ ಪುನಃ ರಕ್ತಗತವಾಗುವುದಿಲ್ಲ;** ಆಗಬಾರದು; ಆದರೆ ಅದರಿಂದ ಹಲವು ಬೇನೆಗಳಾಗುವುದು ಖಂಡಿತ. ಉದಾಹರಣಾರ್ಥ ಪಿತ್ತರಸವು ಆಹಾರ ಪಚನಕ್ಕೆ ಅತ್ಯವಶ್ಯವಾದ ಸ್ರಾವವಾಗಿದೆ ಅದು ಸಪ್ರಮಾಣದಲ್ಲಿ ಸ್ರವಿಸಿ ಆಹಾರದಲ್ಲಿ ಬೆರೆತು ಏಕರೂಪವಾಗಬೇಕು. ಅತಿಪ್ರಮಾಣದಲ್ಲಿ ಸ್ರವಿಸಿದರೆ ವಾಂತಿಯೂ, ಪಿತ್ತಾತಿಸಾರ (ಪಿತ್ತಭೇದಿ) ವೂ ಉಂಟಾಗುವವು.

ಪಿತ್ತರಸವು ಅತಿಸ್ರವಿಸಿದರೆ ಮಲದ್ವಾರದಿಂದ ಹೊರಬಿದ್ದು ಹೋಗಬೇಕು. ಹಾಗಾಗದೆ ಅದು ಪುನಃ ಪುನಃ ರಕ್ತಗತವಾದರೆ ಪಿತ್ತವಿಕಾರಗಳೂ ಕಾಮಣಿ (ಕಾಮಲೆ) ಯೂ ಆಗುವವು ಒಟ್ಟಿನಲ್ಲಿ ವಿಸರ್ಜನ (Excretion) ಗಳೆಲ್ಲ ತಮ್ಮ ಕೆಲಸವಾದ ಕೂಡಲೆ ದೇಹದಿಂದ ಹೊರಬಿದ್ದು ಹೋಗಬೇಕು ಅವಕ್ಕೆ ತಡೆಯಾದರೆ ಬೇನೆಗಳಾಗುವವು. ವೀರ್ಯ ರಜಸ್ಸುಗಳು ಕೂಡ ವಿಸರ್ಜನ ಗಳೆ ಆಗಿವೆ. ಅವುಗಳನ್ನು ಮೂತ್ರ ಬೆವರುಗಳಂತೆ ಸಕಾಲದಲ್ಲಿ ಹೊರ ದೂಡುವ ಹೊಣೆಯನ್ನು ಪ್ರಕೃತಿಯೆ ಹೊತ್ತಿದ್ದಾಳೆ ಅವು ಪುನಃ ರಕ್ತಗತ ವಾಗುವುದಿಲ್ಲ; ಆಗಬಾರದು; ಆದರೆ ಬೇನೆಗಳುಂಟಾಗಲೇಬೇಕು ಮತ್ತೆ ಆಯುರ್ವೇದವೂ ಇದನ್ನೆ ಹೇಳುತ್ತದೆಂದರೆ ಧಾರ್ಮಿಕರು ಬಟ್ಟೆಕಚ್ಚ ಬಹುದು! ಅಷ್ಟಾಂಗ ಹೃದಯದಲ್ಲಿ ಹೀಗೆ ಹೇಳಿದೆ **"ಶುಕ್ರ ಧಾರಣಾತ್ ತತ್‌ಸ್ರವಣಂ ಗುಹ್ಯವೇದನಾ ಶ್ವಯಥುಃ ಜ್ವರಃ, ಹೃದ್ವ್ಯಥಾ ಮೂತ್ರ ಸಂಗ ಅಂಗಭಂಗ ವೃದ್ಧಿ ಅಶ್ಮ ಷಂಢತಾಃ"** ಅಂದರೆ ವೀರ್ಯವು ತಡೆದರೆ ಶುಕ್ರಮೇಹ, ಇಂದ್ರಿಯದ ನೋವು, ಬಾವು, ಜ್ವರ, ಹೃದಯವೇದನೆ, ಮೂತ್ರ ವಿಸರ್ಜನದಲ್ಲಿ ತಡೆ, ಮೈ ಕೈ ನೋವು, ಅಶ್ಮರಿ, ಷಂಢತ್ವ ಮುಂತಾದ ಬೇನೆ ಗಳಾಗುವುವೆಂದೂ ಅದಕ್ಕೆ ಹಲವು ವಿಧದ ಉಪಚಾರಗಳನ್ನು ಹೇಳಿ ಕೊನೆಗೆ **ಪ್ರಿಯಃ ಸ್ತ್ರಿಯಃ** ಪ್ರಿಯರಾದ ಸ್ತ್ರೀಯರೊಡನೆ ಸಮಾಗಮಿಸಬೇಕೆಂದೂ ಕೂಡ ಉಪದೇಶಿಸಲಾಗಿದೆ ವೀರ್ಯನಿರೋಧದಿಂದ ಮೇಲಿನ ರೋಗಗಳು ಉಂಟಾಗುವವೊ ಹೇಗೆಂಬುದು ಚರ್ಚಾಸ್ಪದವಾದ ವಿಷಯವಾದರೂ 'ವೀರ್ಯ ವೆಂಬುದು ಒಂದು ವಿಸರ್ಜನ; ಅದು ವಿಸರ್ಜಿಸಿ ಹೋಗುವುದೆ ಅದರ ಧರ್ಮ' ಎಂಬ ಈಗಿನ ವೈಜ್ಞಾನಿಕ ಸತ್ಯವನ್ನು ಸಾವಿರಾರು ವರುಷಗಳ ಹಿಂದೆ ಆಯು ರ್ವೇದವೂ ಒಪ್ಪಿತ್ತು ಎಂಬುದು ಸ್ಪಷ್ಟವಾಗಿದೆ.

ಈಗ ವೀರ್ಯ ರಜಸ್ಸುಗಳು ವಿಸರ್ಜ್ಯ ವಸ್ತುಗಳೆಂದು ಸಿದ್ಧಾಂತವಾದ ಮೇಲೆ ಸ್ವರತಿಯಿಂದ ಅವನ್ನು ಬೇಕಾದಷ್ಟು ಸ್ಖಲಿಸಿಕೊಂಡರೂ ಅಪಾಯ ವಿಲ್ಲವೇ? ಮತ್ತು ಸ್ತ್ರೀಯ ರಜಸ್ಸು ಮುಟ್ಟಿನ ಸಮಯದಲ್ಲಿ ಮಾತ್ರ ಸ್ರವಿಸು ವುದಲ್ಲದೆ ಅವಳು ಹಸ್ತಪ್ರಯೋಗ ಮಾಡಿಕೊಂಡಾಗಲೆಲ್ಲ ಅದು ಸ್ರವಿಸುವು ದಿಲ್ಲ ಇದು ಪ್ರಕೃತಿಯ ಪಕ್ಷಪಾತವಲ್ಲವೇ? ಎಂಬ ಪ್ರಶ್ನೆಗಳನ್ನು ಉತ್ತರಿಸುವಾ

ವೀರ್ಯರಜಸ್ಸುಗಳು ವಿಸರ್ಜ್ಯಗಳಾಗಿವೆ ಎಂಬುದನ್ನು ಒಪ್ಪಿದರೆ ಅವನ್ನು ಸ್ವರತಿಯಿಂದ ಬೇಕಾದಷ್ಟು ವಿಸರ್ಜಿಸಿ (ಸ್ಖಲಿಸಿ) ಕೊಳ್ಳಬಹುದೆಂದಾಗುವುದಿಲ್ಲ. ಏಕೆಂದರೆ ನಮ್ಮ ದೇಹದ ಯಾವ ವಿಸರ್ಜನವೂ ಮಿತಿಯನ್ನು ಮೀರಕೂಡದು. ಮೂತ್ರವು ವಿಸರ್ಜ್ಯವಾದರೂ ದೇಹವು ಅದನ್ನು ಅತಿಯಾಗಿ ವಿಸರ್ಜಿಸಹತ್ತಿದರೆ 'ಬಹುಮೂತ್ರ' ರೋಗವಾಗುವುದು. ಮಲವು ವಿಸರ್ಜ್ಯವಾದರೂ ಅತಿಯಾದರೆ ಆಮಶೌಚ, ಅತಿಸಾರ ರೋಗಗಳಾಗುವವು ಬೆವರು ವಿಸರ್ಜ್ಯವಾದರೂ ಕ್ಷಯರೋಗದಲ್ಲಿ ಅದು ವಿಶೇಷವಾಗಿ ಹೋಗಹತ್ತಿದರೆ ಶಕ್ತಿಹ್ರಾಸವಾಗುವುದರಿಂದ ಕೂಡಲೆ ಅದನ್ನು ಅಳತೆಯಲ್ಲಿ ತರಬೇಕಾಗುವುದು. ಅದೇ ಪ್ರಕಾರ ವೀರ್ಯವು ತನ್ನಷ್ಟಕ್ಕೆ ವಿಶೇಷವಾಗಿ ಸ್ಖಲಿಸಿದರೆ 'ಶುಕ್ರಮೇಹ' (Spermatorrhoea) ಎಂಬ ರೋಗವೆನಿಸುವುದು. ರಜಸ್ಸು ವಿಶೇಷವಾಗಿ ಪ್ರವಹಿಸಿದರೆ ಪ್ರದರ (Menorrhagia) ಎಂಬ ರೋಗವೆನಿಸುವುದು. ಮಿತಿಮೀರಿದ ಪ್ರತಿಯೊಂದು ವಿಸರ್ಜನವನ್ನೂ ಅಳತೆಯಲ್ಲಿ ತರಬೇಕು.

ಇಲ್ಲಿ ಒಂದು ತತ್ವವನ್ನು ತಿಳಿದುಕೊಳ್ಳಬೇಕು. ವಿಸರ್ಜನಗಳು ಅತಿಯಾಗಿ ಸ್ರವಿಸಿದರೆ ಉಂಟಾಗುವ ಅಪಾಯಕ್ಕೆ ವಿಸರ್ಜ್ಯ ವಸ್ತುಗಳು ಹೆಚ್ಚಾಗಿ ಹೊರಟುಹೋದುದು ಕಾರಣವಲ್ಲ. ಆದರೆ ಅದನ್ನು ಹೆಚ್ಚಾಗಿ ವಿಸರ್ಜಿಸುವುದಕ್ಕಾಗಿ ವಿಸರ್ಜಕಾಂಗಗಳು ಹೆಚ್ಚಾಗಿ ದುಡಿದು ಶ್ರಮಬಟ್ಟುದು ಕಾರಣವಾಗಿದೆ. ಬಹುಮೂತ್ರದಲ್ಲಿ ಮೂತ್ರವು ವಿಶೇಷವಾಗಿ ವಿಸರ್ಜಿತವಾಗುವುದರಿಂದ ನಷ್ಟವಿಲ್ಲ; ಆದರೆ ಮೂತ್ರವನ್ನು ತಯಾರಿಸಿ ಹೊರಗೆ ತಳ್ಳುವಲ್ಲಿ ಮೂತ್ರಾಂಗಗಳು ಹೆಚ್ಚಾಗಿ ದುಡಿದು ಶ್ರಮಿಸುತ್ತಿರುವುದೆ ನಮಗಾಗುತ್ತಿರುವ ನಷ್ಟವಾಗಿದೆ. ಆದ್ದರಿಂದ ಅತಿಮೂತ್ರದಲ್ಲಿ ಮೂತ್ರಸಂಗ್ರಹಕ್ಕೆ ನಾವು ಯತ್ನಿಸಿದರೆ ನಾವು ಮೂರ್ಖರಾಗುವೆವು ಆದರೆ ಮೂತ್ರಾಂಗಗಳನ್ನು ಬಲಪಡಿಸಿ ಅವು ಸರಿಯಾದ ಪ್ರಮಾಣದಲ್ಲಿ ಮೂತ್ರವಿಸರ್ಜನ ಮಾಡುವಂತೆ ಅವನ್ನು ಕ್ರಮಗೊಳಿಸುವುದು ಜಾಣತನದ ಉಪಚಾರವಾಗಿದೆ. ಹಾಗೆಯೆ ವೀರ್ಯವು ಕೂಡ ಸ್ವರತಿಯಲ್ಲಿ ವಿಶೇಷವಾಗಿ ಹೊರಟುಹೋದರೆ, ಹೊರಗೆ ಹೋದ ವೀರ್ಯಕ್ಕೇನೂ ಮಹತ್ವವಿಲ್ಲ. ಅದು ಹೇಗೂ ವಿಸರ್ಜ್ಯವೇ. ಆದರೆ ಪ್ರಕೃತಿಯು ಅದನ್ನು ೧೫–೨೦ ದಿನಗಳಿಗೊಮ್ಮೆ ವಿಸರ್ಜಿಸುತ್ತಿದ್ದುದರಿಂದ ವೀರ್ಯಾಂಗಗಳಿಗೆ ಅವಶ್ಯವಿದ್ದಷ್ಟೇ ದುಡಿತ ಬೀಳುತ್ತಿತ್ತು. ಆದರೆ ಮುಷ್ಟಿ

ೃಥುನದಿಂದ ಅದನ್ನು ದಿನಾಲು ಸ್ಖಲಿಸಿಕೊಂಡರೆ ಆ ಅಂಗಗಳಿಗೆ ಅನವಶ್ಯಕ ದ ದುಡಿತ ಬೀಳುವುದು. ಹಸ್ತಪ್ರಯೋಗದಿಂದ ಏನಾದರೂ ಹಾನಿಯಾಗು ದ್ದರೆ ಅದು ವೀರ್ಯಸ್ಖಲನದಿಂದಾಗುವುದಿಲ್ಲ; ಅದರೆ ವೀರ್ಯಾಂಗಗಳ ತಿಮೀರಿದ ದುಡಿತದಿಂದ. ಮುಷ್ಟಿಮೈಥುನದಿಂದ ಸ್ಖಲಿಸಿ ಹೋದ ವೀರ್ಯದ ಮಾಣವು ಗಣ್ಯಮಾದುದಲ್ಲ ಹಸ್ತಪ್ರಯೋಗಿಗಳು 'ಅಯ್ಯೋ ನಾನು ಷ್ಟು ವೀರ್ಯವನ್ನು ಕಳೆದುಕೊಂಡೆನಲ್ಲಾ!' ಎಂದು ಅಳುವುದು, ವಿರೇಚನ ಷಧ ತೆಗೆದುಕೊಂಡವನು 'ಅಯ್ಯೋ ನಾನು ಎಷ್ಟು ಮಲವನ್ನು ಕಳೆದು ೊಂಡೆನಲ್ಲಾ!' ಎಂದು ಶೋಕಿಸುವಷ್ಟೆ ಹಾಸ್ಯಾಸ್ಪದವಾಗಿದೆ 'ನನ್ನ ೀರ್ಯಾಂಗಗಳೆಲ್ಲ ಸಶಕ್ತವಾಗಿರುವಾಗ ಅವಕ್ಕೆ ಕೊಂಚವೂ ಶ್ರಮವಾಗದೆ ೊಡಗಟ್ಲೆ ವೀರ್ಯ ಕಳೆದುಕೊಂಡರೂ ನಾನು ಲಕ್ಷಿಸುವುದಿಲ್ಲ' ಎಂಬ ಒಬ ಾಮವಿಜ್ಞಾನಿಯ ಮಾತು ತಥ್ಯಪೂರ್ಣವಾಗಿದೆ ಎನ್‌ಸೈಕ್ಲೋಪೀಡಿಯಾ ಫ್ ಸೆಕ್ಸುಅಲ್ ನೊಲೆಜ್ ಎಂಬ ಗ್ರಂಥದಲ್ಲಿ ಅದರ ಸಂಪಾದಕನೂ ಅಸಂಖ್ಯ ಸ್ತಪ್ರಯೋಗಿ ಸ್ತ್ರೀಪುರುಷರ ಸಂದರ್ಶನವನ್ನು ಪಡೆದು ವಿಶಾಲವಾದ ನುಭವವುಳ್ಳವನೂ ಆದ ಬ್ರಿಟನ್ನಿನ ಸುಪ್ರಸಿದ್ಧ ಕಾಮವಿಜ್ಞಾನಿ ಡಾಕ್ಟರ್ ಾರ್ಮನ್ ಹೇರ್, ಸಿ. ಎಚ್ ಎಂ., ಎಂ ಬಿ. ಅವನು ಈ ವಿಷಯದಲ್ಲಿ The amount of semen lost at an emission is small in quantity nd the loss of it has no more importance for the bodily health ian the loss of saliva from the mouth or tears from the eye" ಂದರೆ ಒಂದು ಸಲದ ಸ್ಖಲನದಲ್ಲಿ ವೀರ್ಯವು ಕೊಂಚ ಮಾತ್ರ ವೆಚ್ಚವಾಗು ್ತದೆ. ದೇಹದ ಆರೋಗ್ಯದ ದೃಷ್ಟಿಯಿಂದ ಅಷ್ಟು ವೀರ್ಯದ ವೆಚ್ಚವು ಾಯಿಂದ ಸ್ರವಿಸಿದ ಜೊಲ್ಲಿಗಿಂತ ಅಥವಾ ಕಣ್ಣಿನಿಂದ ಸ್ರವಿಸಿದ ಕಂಬನಿಗಿಂತ ೆಚ್ಚಿನ ಮಹತ್ವವುಳ್ಳದ್ದಲ್ಲ ಎಂದು ಅಂದಿದ್ದಾನೆ.

ಈಗ ಪ್ರಕೃತಿಯ ಪಕ್ಷಪಾತದ ವಿಷಯವನ್ನು ತೆಗೆದುಕೊಳ್ಳುವಾ. ್ತ್ರೀಗೂ ಹಸ್ತಪ್ರಯೋಗಕಾಲದಲ್ಲಿ ವಿಶೇಷ ಕಾಮೋದ್ರೇಕವಾದಾಗ ಅವಳ ಯೋನಿಯ ಒಳಮೈಯಿಂದಲೂ ಬಾರ್ಥೊಲಿನ್ ಗ್ರಂಥಿಗಳಿಂದಲೂ ಒಂದು ಥದ ಶ್ಲೇಷ್ಮವು ಒಸರಿ ಬರುವುದು ಪುರುಷನ ವೀರ್ಯಾಂಗಗಳಿಗೆ ದುಡಿತ ಿದ್ದಂತೆ ಸ್ತ್ರೀಯ ಶ್ಲೇಷ್ಮಾಂಗಗಳಿಗೂ ದುಡಿತ ಬೀಳುವುದು. ಅಂದ ಮೇಲೆ

ಇಲ್ಲಿ ಪ್ರಕೃತಿಯ ಪಕ್ಷಪಾತವೂ ಇಲ್ಲದಂತಾಯಿತು. ಆದರೆ ಹಸ್ತಪ್ರಯೋಗದಲ್ಲಿ ರಜೋವೀರ್ಯಾಂಗಗಳಿಗೆ ಮಿತಿ ಮೀರಿ ದುಡಿತ ಬೀಳುವುದೆಂಬುದೊಂದೇ ಹಾನಿಯೇ? ಮತ್ತಾವ ಹಾನಿಯೂ ಇಲ್ಲವೇ? ಎಂಬ ಪ್ರಶ್ನೆಗಳು ಇಲ್ಲಿ ಹುಟ್ಟುವದು ಸಹಜವಾಗಿದೆ. ಆ ಪ್ರಶ್ನೆಗಳಿಗೆ ಪರಿಪೂರ್ಣವಾದ ಉತ್ತರ ಸಿಗಬೇಕಾದರೆ ಸ್ವರತಿಯಿಂದಾಗಬಹುದಾದ ಪರಿಣಾಮವನ್ನು (೧) ದೈಹಿಕ (೨) ಮಾನಸಿಕ ಎಂದು ಎರಡು ವರ್ಗಗಳಲ್ಲಿ ವಿಭಾಗಿಸುವುದೊಳಿತು.

## ದೈಹಿಕ

ಸ್ವರತಿಯಿಂದ ದೇಹದ ಮೇಲೆ ಆಗುವ ಪರಿಣಾಮಗಳಲ್ಲಿ ಒಂದನ್ನು ನಾವು ಈಗಾಗಲೆ ಸೂಚಿಸಿದ್ದೇವೆ. ಅದೆಂದರೆ ರಜೋವೀರ್ಯಾಂಗಗಳ ದುಡಿತ ವೀರ್ಯವೆಷ್ಟು ಖರ್ಚಾಯಿತು ಎಂಬುದು ಮುಖ್ಯವಲ್ಲ; ವೀರ್ಯಾಂಗಗಳಿಗೆ ಎಷ್ಟು ಶ್ರಮವನ್ನು ಕೊಟ್ಟೆವು ಎಂಬುದು ಮುಖ್ಯ. ಸ್ವರತಿಯಲ್ಲಿ ಕಾಮಾಂಗಗಳ ಕಡೆಗೆ ವಿಶೇಷವಾಗಿ ರಕ್ತ ಹರಿಯುವದು ಅದರಿಂದ ಪುರುಷನಲ್ಲಿ ವೀರ್ಯವೂ ಸ್ತ್ರೀಯಲ್ಲಿ ಶ್ಲೇಷ್ಮವೂ ಹೆಚ್ಚಾಗಿ ನಿರ್ಮಾಣವಾಗುವವು ತತ್ಪರಿಣಾಮವಾಗಿ ವೀರ್ಯಾಂಗಗಳಿಗೂ ವಿಶೇಷ ದುಡಿತ ಬಿದ್ದು ಅವು ದುರ್ಬಲವಾಗುವ ಸಂಭವವಿರುತ್ತದೆ

ಪುರುಷನು ದಿನಕ್ಕೆ ಹಲವು ಸಲ ಮುಷ್ಟಿ ಮೈಥುನವನ್ನು ಮಾಡಿಕೊಂಡರೆ ಮೊದಲು ಒಂದೆರಡು ಸಲ ವೀರ್ಯಪತನವಾಗುವದು ಮುಂದೆ ಬರಿ ಪ್ರಸ್ಥಿತ ಗ್ರಂಥಿ, ಕೌಪರಗ್ರಂಥಿ ಮೊದಲಾದವುಗಳಿಂದ ನೀರಿನಂತಹ ವಸ್ತುವು ಜಿನುಗಿ ಬರುವದು ಅದರಲ್ಲಿ ಪ್ರಸ್ಥಿತಗ್ರಂಥಿಯು ಕಾಮಜೀವನದ ಆರೋಗ್ಯ ಸ್ಥೈರ್ಯಗಳಿಗೆ ಹೆಚ್ಚು ಮಹತ್ವವಾದ ಗ್ರಂಥಿಯಾಗಿದೆ. ಮತ್ತು ಬೀಜ ಕೋಶ ಹಾಗೂ ಅಂಡಗಳ ಆರೋಗ್ಯವು ಪ್ರಸ್ಥಿತ ಗ್ರಂಥಿಯ ಆರೋಗ್ಯವನ್ನವಲಂಬಿಸಿದೆ ಆದ್ದರಿಂದ ದಿನಾಲು ಅನೇಕಾವರ್ತಿ ಸ್ವರತಿಯನ್ನಾಚರಿಸುವದರಿಂದ ಪ್ರಸ್ಥಿತ ಗ್ರಂಥಿಯ ಆರೋಗ್ಯವು ಕೆಟ್ಟು ತತ್ಪರಿಣಾಮವಾಗಿ ಅಂಡ ಬೀಜಕೋಶಗಳೂ ದುರ್ಬಲವಾಗಿ ವೀರ್ಯವು ನೀರಾಗುವದು. ಬೀಜಾಣುಗಳು ಅಶಕ್ತವಾಗುವವು. ಸ್ತ್ರೀಪುರುಷರಿಬ್ಬರಿಗೂ ಸ್ವರತಿಯ ಕಾಲದಲ್ಲಿ ಕಾಮಾಂಗಗಳ ಕಡೆಗೆ ರಕ್ತ ಹರಿಯಬೇಕಾದರೆ ಬೆನ್ನು

ಹುರಿಯಲ್ಲಿಯ ನರಗಳ ಉತ್ತೇಜನವು ಬೇಕಾಗುವದು. ಅತಿಯಾಗಿ ಸ್ಮರತಿಯನ್ನಾಚರಿಸಿದರೆ ಬೆನ್ನಿನ ಕೆಳಭಾಗದ ನರಗಳು ಮೇಲಿಂದಮೇಲೆ ಉತ್ತೇಜಿತವಾಗಿ ಕ್ರಮೇಣ ಅಶಕ್ತವಾಗುತ್ತವೆ ಅದರಿಂದ ಸೊಂಟದ ನೋವು ಕಾಣಿಸಿಕೊಳ್ಳುವದು ಆ ಕಟಿಪ್ರದೇಶದ ಕಸೇರುಕೆ (ಬೆನ್ನುಹುರಿ) ಯಿಂದ ಮಲಮೂತ್ರಾಂಗಗಳಿಗೂ ನರಗಳು ಹೋಗುವವು. ಆದ್ದರಿಂದ ಅತಿ ಸ್ಮರತಿಯಿಂದ ಆ ಭಾಗದ ಮಿದುಳುಬಳ್ಳಿಗೆ ಹೆಚ್ಚು ದುಡಿತ ಬಿದ್ದರೆ ಮಲಬದ್ಧತೆಯಾಗಲೂಬಹುದು. ಹಸ್ತಪ್ರಯೋಗದಿಂದ ಸ್ತ್ರೀಯರ ಡಿಂಭಾಶಯಗಳಿಗೆ ಮೇಲಿಂದ ಮೇಲೆ ಮಿತಿಮೀರಿ ರಕ್ತಹೋಗುವದರಿಂದ ಅವುಗಳ ಆರೋಗ್ಯವೂ ಕೆಡುವ ಸಂಭವವಿದೆ. ಹಸ್ತಪ್ರಯೋಗಿಗಳ ಮೂತ್ರಕೋಶವು ಮೇಲಿಂದ ಮೇಲೆ ರಕ್ತಸಂಚಿತವಾಗುವದರಿಂದ ಮೂತ್ರಾಶಯ ದಾಹ (Cystitis) ವಾಗಬಹುದು. ಅದರಿಂದ ಮೂತ್ರದ ಸಂಗಡ ಶ್ಲೇಷ್ಮವು ವಿಸರ್ಜಿತವಾಗುವದು. ಅದನ್ನು ಕೆಲವು ಕಪಟಿಗಳಾದ ಡಾಕ್ಟರ–ವೈದ್ಯ–ಹಕೀಮರು ವೀರ್ಯವೆಂದೋ ಪರಮಾ ಎಂದೋ ಹೇಳಿ ರೋಗಿಗಳನ್ನು ಬೆದರಿಸುವದುಂಟು

ಸ್ತ್ರೀಯ ಯೋನಿಯ ಮೇಲ್ಗಡೆಯಲ್ಲಿ ಚಂದ್ರನಾಡಿ ಎಂಬ ಒಂದು ಕಾಮುಶೀರವಿದೆ ಬಾಲ್ಯಾವಸ್ಥೆಯಲ್ಲಿ ಹುಡುಗಿಯರಿಗೆ ಅದು ಬಹಳ ಸಂವೇದಿಸಿಯಾಗಿರುತ್ತದೆ ಹುಡುಗಿಯರಲ್ಲಿ ಅನೇಕರು ಸ್ವರತಿಯಲ್ಲಿ ಚಂದ್ರನಾಡಿಯನ್ನೇ ಉದ್ರೇಕಿಸಿಕೊಳ್ಳುವರೆಂದು ಕಂಡುಬಂದಿದೆ ಹುಡುಗಿಯು ತರುಣಿಯಾದ ನಂತರ ನೈಸರ್ಗಿಕವಾಗಿ ಚಂದ್ರನಾಡಿಯಲ್ಲಿಯ ಸಂವೇದನೆಯು ಯೋನಿಗಿಳಿಯುವುದೆಂದೂ ಆದ್ದರಿಂದಲೇ ತರುಣಿಯರಿಗೆ ಸಂಭೋಗದಲ್ಲಿ ಯೋನಿಯ ಸುಖಸಂವೇದನೆಯೆನಿಸುವದೆಂದೂ ವಿಜ್ಞಾನಿಗಳೆನ್ನುತ್ತಾರೆ. ಬಾಲ್ಯದಲ್ಲಿಯೂ ತಾರುಣ್ಯದಲ್ಲಿಯೂ ಹಸ್ತಪ್ರಯೋಗವನ್ನು ಅತಿಯಾಗಿ ಮಾಡಿಕೊಂಡರೆ ಸಂವೇದನೆಯು ಚಂದ್ರನಾಡಿಯಲ್ಲಿಯೆ ಉಳಿದು ಯೋನಿಯು ನಿರ್ವೇದಿಸಿಯಾಗಿರುವದು (Lacking sensory pleasure). ಅದರಿಂದ ಮುಂದೆ ದಾಂಪತ್ಯದಲ್ಲಿ ಅವರಿಗೆ ಸಂಭೋಗದಲ್ಲಿ ಸುಖವೆನಿಸದೆ ಪ್ರತಿಸಲ ಸಂಭೋಗವಾದ ನಂತರ ಹಸ್ತಪ್ರಯೋಗವನ್ನು ಮಾಡಿಕೊಳ್ಳಬೇಕೆಂದು ಅವರಿಗೆನಿಸುವದು.

ಸ್ವರತಿಯ ಕ್ರಿಯೆಗಳು ನಿರಾಶಾಮಯ ಪರಿಸ್ಥಿತಿಯಲ್ಲಿ ನಡೆಯುವವು ಏಕೆಂದರೆ ಸ್ತ್ರೀಪುರುಷರು ಸಕಾಲದಲ್ಲಿ ಪ್ರಿಯಪ್ರಿಯೆಯರು ಕಾಮೋಪ-ಭೋಗಕ್ಕೆ ಸಿಗದ್ದರಿಂದ ಅಥವಾ ಸಾಮಾಜಿಕ ಪರಿಸ್ಥಿತಿಯು ಅವಕ್ಕೆ ಅನುಕೂಲವಿಲ್ಲದ್ದರಿಂದಲೆ ಹಸ್ತಪ್ರಯೋಗಕ್ಕೆ ತೊಡಗುತ್ತಾರೆ ಆ ನಿರಾಶೆಯಿಂದ ಪ್ರಕ್ಷುಬ್ಧರಾದ ತರುಣತರುಣಿಯರು ಕಾಮೋದ್ವೇಗದಲ್ಲಿ ತಮ್ಮ ಲಿಂಗಯೋನಿಗಳನ್ನು ಬಹು ತೀಕ್ಷ್ಣವಾಗಿ ಘರ್ಷಿಸುವರು ಅತಿ ಘರ್ಷಣದಿಂದ ಕೋಮಲವಾದ ಜನನೇಂದ್ರಿಯಗಳು ತಮ್ಮ ಮಾರ್ದವವನ್ನು ಕಳೆದುಕೊಳ್ಳುವವು ಸ್ತ್ರೀಗೆ ಯೋನಿ ಚಂದ್ರನಾಡಿಗಳಲ್ಲಿಯ ಸಂವೇದನೆಯು ಮುಂದಗೊಳ್ಳುವದರಿಂದ ಸಂಭೋಗದಲ್ಲಿ ಬೇಸರವೆನಿಸುವದು ಪುರುಷನ ಇಂದ್ರಿಯದ ಸ್ನಾಯುಗಳು ಅತಿ ಘರ್ಷಣದಿಂದ ದುರ್ಬಲವಾಗಿ ಲಿಂಗೋದ್ರೇಕವು ಸಾಕಷ್ಟು ಬಲವಾಗಿ ಆಗುವದಿಲ್ಲ; ಆದರೂ ಬೇಗ ಸಡಿಲುಬೀಳುವದು. ಸ್ವರತಿಯನ್ನು ಹೆಚ್ಚಾಗಿ ಆಚರಿಸಿದ ಸ್ತ್ರೀಗೆ ಸಂಭೋಗದಲ್ಲಿ ಯೋನಿ ಘರ್ಷಣದಿಂದ ಬೇಗ ಸುಖ ಸಿಗುವದಿಲ್ಲ. ಗಂಡಸು ಸ್ವರತಿಯಲ್ಲಿ ಉದ್ವೇಗದಿಂದ ಬೇಗ ಬೇಗ ಲಿಂಗ ಸಂಚಾಲನಗೈದು ವೀರ್ಯಸ್ಖಲಿಸಿಕೊಳ್ಳುವ ಚಟವನ್ನು ಪಡೆದಿರುವುದರಿಂದ ಮುಂದೆ ಸಂಭೋಗದಲ್ಲಿಯೂ ಅವನಿಗೆ ಹೆಚು ಹೊತ್ತು ವೀರ್ಯಧಾರಣ ಮಾಡಲಾಗುವದಿಲ್ಲ ಸರಿ **ಬೇಗ ದ್ರವಿಸದ ಹೆಂಡತಿ! ಶೀಘ್ರಸ್ಖಲಿಸುವ ಗಂಡ! ಅವರ ಸಂಸಾರ ಸುಖವನ್ನು ವರ್ಣಿಸುವ ಅಗತ್ಯವೆ ಇಲ್ಲ.**

ಕಾಮೋದ್ವೇಗದಲ್ಲಿ ಇಂದ್ರಿಯವನ್ನು ಸಿಕ್ಕ ಸಿಕ್ಕ ಹಾಗೆ ತಿಕ್ಕಿಕೊಳ್ಳುವದರಿಂದ ಇಂದ್ರಿಯದ ಸ್ನಾಯು ಸಾಮುಗ್ರಿಗಳು ನುಗ್ಗಾಗಿ ಲಿಂಗವು ಡೊಂಕಾಗಬಹುದು. ಅನುದ್ರಿಕ್ತಾವಸ್ಥೆಯಲ್ಲಿ ವಿಪರೀತವಾಗಿ ಮುದುಡಿಕೊಳ್ಳಬಹುದು ನಮಗೆ ಬಂದಿರುವ ಪತ್ರಗಳಲ್ಲಿ ಕೆಲವರು ಉದ್ರಿಕ್ತವಾದಾಗ ಲಿಂಗವು ೫ ಇಂಚು ಉದ್ದವಾಗಿದ್ದರೂ ಅನುದ್ರಿಕ್ತಾವಸ್ಥೆಯಲ್ಲಿ ಅರ್ಧ ಇಂಚಿನಷ್ಟು ಉದ್ದವಾಗಿರುವುದೆಂದು ಗೋಳಾಡಿದ್ದಾರೆ.

ಕಂಣು ಮತ್ತು ಮೂಗು, ಕಾಮಾಂಗಗಳಿಗೆ ಹೆಚ್ಚು ಸಂಬಂಧವುಳ್ಳ ಇಂದ್ರಿಯಗಳಾಗಿವೆಯೆಂದು ಕೆಲವು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಮಿತಿಮೀರಿ ಮುಷ್ಟಿಮೈಥುನ ಮಾಡಿಕೊಳ್ಳುವ ಹುಡುಗ ಹುಡುಗಿಯರ

ಕಂಣು ಮತ್ತು ಮೂಗುಗಳ ಮೇಲೆ ಪರಿಣಾಮವಾಗುವದೆಂದು ನಮಗೆ ಬಂದಿರುವ ಸ್ವರತರ ಪತ್ರಗಳಿಂದ ಸ್ಪಷ್ಟವಾಗಿ ತಿಳಿಯುವಂತಿದೆ. ಒಬ್ಬ ಹದಿನೆಂಟು ವರ್ಷದ ಯುವಕನು ಹೆಚ್ಚಾಗಿ ಮುಷ್ಟಿಮೈಥುನವನ್ನು ಮಾಡಿಕೊಂಡರೆ ತಪ್ಪದೆ ತನಗೆ ನೆಗಡಿ ಬರುವದೆಂದು ಪ್ರಯೋಗ ಮಾಡಿಕೊಂಡು ನಮಗೆ ಬರೆದಿದ್ದಾನೆ ಮುಷ್ಟಿಮೈಥುನವನ್ನು ಮಾಡಿಕೊಂಡು ಒಂದೆರಡು ದಿನಗಳವರೆಗೆ ಕಂಣು ನೋಯುತ್ತವೆಯೆಂದು ಕೆಲವರು ಬರೆದಿದ್ದಾರೆ ಈ ವಿಷಯುವಲ್ಲಿ ನಿಶ್ಚಿತವಾದ ಸಿದ್ಧಾಂತಗಳನ್ನು ತೆಗೆಯುವುದು ಕಷ್ಟ. ಏಕೆಂದರೆ ಸುಪ್ರಸಿದ್ಧ ಕಾಮವಿಜ್ಞಾನಿಗಳು ಆ ವಿಷಯುವಲ್ಲಿ ಒಮ್ಮತದಿಂದ ಏನನ್ನೂ ಹೇಳಿಲ್ಲ ಆದರೆ ಸ್ವರತಿಯಲ್ಲಿ ಇಡೀ ದೇಹದ ನರಮಂಡಲವು ಉದ್ವೇಗಗೊಳ್ಳುವದರಿಂದ ಅದರ ಪರಿಣಾಮವು ಕಂಣು ಮೂಗುಗಳ ಮೇಲೂ ಆಗುವ ಸಂಭವವಿದೆಯೆಂದು ವೈಯಕ್ತಿಕ ಅನುಭವಗಳಿಂದ ಕಂಡುಬಂದಿದೆ

ಸ್ವರತಿಯ ಚಟುವಟಿಕೆಗಳಲ್ಲಿ ಸಮಗ್ರ ದೇಹದ ನರಗಳು ಉತ್ತೇಜಿತವಾಗಿರುತ್ತವೆ; ಹೃದಯದ ವೇಗ ಹೆಚ್ಚುತ್ತದೆ; ಮೈಯಲ್ಲಿ ಕಾವೇರುತ್ತದೆ ದಿನದಲ್ಲಿ ಅನೇಕಾವರ್ತಿ ಹಸ್ತಪ್ರಯೋಗ ಮಾಡಿಕೊಳ್ಳುವವರ ದೇಹವು ಆ ಅವಸ್ಥೆಯನ್ನು ದಿನದಲ್ಲಿ ಹಲವು ಸಲ ಅನುಭವಿಸುವದರಿಂದ ಅತಿ ಸ್ವರತಿಯಿಂದ ಬೇಕಾದ ಅಂಗದ ಮೇಲೆ ಪರಿಣಾಮವಾಗಬಹುದು. ಹಾಗೆ ಸಮಗ್ರ ದೇಹದ ಮೇಲೆ ಅತಿ ಸ್ವರತಿಯಿಂದ ಆಗುವ ಪರಿಣಾಮಗಳಲ್ಲಿ ಅಗ್ನಿಮಾಂದ್ಯ ಮಲಬದ್ಧತೆ, ಅರುಚಿ, ತಲೆಶೂಲೆ, ಸೊಂಟನೋವು, ಕಂಣಿನ ಸೆಳೆತ, ನೆಗಡಿಗಳನ್ನು ಪ್ರಾಮುಖ್ಯವಾಗಿ ಎಣಿಸಬಹುದು

ಮುಷ್ಟಿಮೈಥುನದಿಂದ ಉಂಟಾಗುವ ದುಷ್ಪರಿಣಾಮಕ್ಕೆ ವೀರ್ಯಸ್ಖಲನವೇ ಕಾರಣವೆಂದು ತಿಳಿದ ಕೆಲವರು 'ಸಂಯತ ಸ್ವರತಿ' ಯನ್ನು ಆಚರಿಸುವರು. ಅಂದರೆ ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತ ವೀರ್ಯಸ್ಖಲನದ ಅವಧಿ ಸಮೀಪಿಸಿದ ಕೂಡಲೆ ಲಿಂಗಸಂಚಾಲನವನ್ನು ನಿಲ್ಲಿಸುವರು. ಹೀಗೆ ದಿನದಲ್ಲಿ ಅನೇಕಾವರ್ತಿ ಮುಷ್ಟಿಮೈಥುನ ಮಾಡಿಕೊಂಡರೂ ಒಮ್ಮೆಯೂ ವೀರ್ಯಸ್ಖಲನಮಾಡಿಕೊಳ್ಳಲಿಲ್ಲವೆಂದು ಜಂಭಕೊಚ್ಚುವ ಅನೇಕರಿದ್ದಾರೆ. ಈ ಪ್ರಕಾರದ ಸ್ವರತಿಯು ಬಹಳ ಅಪಾಯಕಾರಿಯೆಂದು ಒಮ್ಮತದಿಂದ ಎಲ್ಲ ಕಾಮವಿಜ್ಞಾನಿಗಳೂ ಅಭಿಪ್ರಾಯಪಟ್ಟಿದ್ದಾರೆ. ಹಾಗೆ ಸಂಯತ ಸ್ವರತಿ

ಯನ್ನಾಚರಿಸುವಾಗ ಜ್ಞಾತವಾಗಿ ವೀರ್ಯವು ಸ್ಖಲಿಸದಿದ್ದರೂ ಅಜ್ಞಾತವಾಗಿ ಸ್ವಪ್ನಾವಸ್ಥೆ ಅಥವಾ ಮಲಮೂತ್ರ ವಿಸರ್ಜನ ಕಾಲದಲ್ಲಿ ವೀರ್ಯವು ಹೋಗದೆ ಬಿಡದು. ಅಲ್ಲದೆ ವೀರ್ಯಕ್ಕೆ ವಿಶೇಷ ಮಹತ್ವವಿಲ್ಲೆಂದು ಈ ಮೊದಲೆ ವಿವೇಚಿಸಿದ್ದೇವೆ. ಕಾಮ ಪೀಡೆಯಿಂದ ಲಿಂಗ ಸಂಚಾಲನ ಮಾಡಿಕೊಳ್ಳುವಾಗ ಉದ್ರಿಕ್ತವಾದ ಸಮಗ್ರ ದೇಹದ ನರಮಂಡಲಕ್ಕೆ ವೀರ್ಯಸ್ಖಲನವೆ ದ್ರಾವಣವನ್ನೂ, ಶಾಂತಿಯನ್ನೂ ಕೊಡುವದು ಸ್ಖಲನವನ್ನು ದೂರವಾಗಿಟ್ಟು ಮುಷ್ಟಿಮೈಥುನ ಮಾಡಿಕೊಳ್ಳುತ್ತ ಹೋದ ಹಾಗೆ ದೇಹದ ನರತಂತುಗಳೂ ಮಿದುಳೂ ಶಾಂತಿಕಾಣದೆ ನಿರಂತರವಾಗಿ ತತ್ತರಿಸುತ್ತವೆ. ಸ್ವಸ್ತ್ರೀಯೊಡನೆ ಸಂಭೋಗಿಸುವಾಗಲೂ ಗರ್ಭನಿರೋಧಕ ಉದ್ದೇಶದಿಂದ ಸಂಯತರತಿ (Coitus reservatus) ಯನ್ನು ಆಚರಿಸುತ್ತಿದ್ದ ಗಂಡಂದಿರಲ್ಲಿ ಅನೇಕರು ಕೆಲವು ಕಾಲ ನಪುಂಸಕತೆಯಿಂದ ಬಳಲಿದ್ದಾರೆ. **ಅತಿ ಮುಷ್ಟಿಮೈಥುನದಿಂದಾಗುವ ದುಷ್ಪರಿಣಾಮಗಳ ನೂರು ಪಾಲು ಹೆಚ್ಚು ಕೆಡುಕು ಸಂಯತ ಸ್ವರತಿಯಿಂದಾಗುವದು.**

## ಮಾನಸಿಕ

ಮೇಲಿನ ವಿವರಣೆಯನ್ನು ಓದಿ ಸ್ವರತಿಯಿಂದ ದೇಹದ ಮೇಲೆ ಅಂತಹ ಭಯಂಕರವಾದ ದುಷ್ಪರಿಣಾಮವೇನೂ ಆಗುವದಿಲ್ಲವೆಂದು ವ್ಯಕ್ತವಾಗುವದು. ಮೇಲಿನ ದುಷ್ಪರಿಣಾಮಗಳು ಕೂಡ ಅತಿ ಮುಷ್ಟಿ ಮೈಥುನದಿಂದಾಗುತ್ತವೆ ಯೆಂದೂ ಸಿದ್ಧವಾಗಿದೆ. ಸ್ವರತಿಯಿಂದ ದೇಹದ ಇನ್ನೊಂದು ಮುಖ್ಯ ಭಾಗದ ಮೇಲೆ ಪರಿಣಾಮವಾಗುತ್ತದೆ ಆದರೆ ಆ ಭಾಗವು ಮನಸ್ಸಿಗೆ ಹೆಚ್ಚಾಗಿ ಸಂಬಂಧಿಸಿರುವ್ರದರಿಂದ ಅದನ್ನು ಮಾನಸಿಕ ಪರಿಣಾಮಗಳ ಗುಂಪಿನೊಡನೆ ಇಲ್ಲಿ ವಿವೇಚಿಸಿದ್ದೇವೆ. ಆ ಮುಖ್ಯ ಭಾಗವೆಂದರೆ 'ಓಜೋಗ್ರಂಥಿಗಳ ವ್ಯೂಹ' ವಾಗಿದೆ. ಓಜೋಗ್ರಂಥಿಗಳು ದೇಹ ಮತ್ತು ಮನೋರಾಜ್ಯಗಳ ನಡುವಿನ ಸೇತುವೆಯಂತಿವೆ. ದೇಹದಲ್ಲಿ ನಡೆಯುವ ತೀವ್ರವಾದ ವಿಕಾರ ಹರ್ಷಗಳು ಓಜೋಗ್ರಂಥಿಗಳ ಮೂಲಕ ಮನೋರಾಜ್ಯದಲ್ಲಿ ಹರಡುತ್ತವೆ. ಮನೋರಾಜ್ಯದ ಸುಖ ದುಃಖಗಳು ಓಜೋಗ್ರಂಥಿಗಳ ಮೂಲಕ ದೇಹರಾಜ್ಯದಲ್ಲಿ ಕ್ರಾಂತಿ, ಪಲ್ಲಟಗಳನ್ನುಂಟುಮಾಡುತ್ತವೆ ಉದಾಹರಣಾರ್ಥ ಮನದಲ್ಲಿ ಕಾಮುಕ ವಿಚಾರಗಳು ತಲೆದೋರಿದರೆ ಮೊದಲು ಪಿಟ್ಯು

ಯಿಟೆರಿಯು ಉತ್ತೇಜಿತವಾಗಿ ಸ್ತ್ರೀ ಪುರುಷರ ಕಾಮಾಂಗಗಳನ್ನು ಉದ್ರೇಕಿಸುತ್ತದೆ. ಆ ಉದ್ರೇಕದಿಂದ ಸ್ರವಿಸಿದ ಅಂತಃಶುಕ್ರವು ರಕ್ತದಲ್ಲಿ ಸೇರಿ ನರಮಂಡಲವನ್ನೂ ಅಧಿವೃಕ್ಕ ಮೊದಲಾದ ಬೇರೆ ಓಜೋಗ್ರಂಥಿಗಳನ್ನೂ ಜಾಗೃತಗೊಳಿಸುತ್ತದೆ. ಅಧಿವೃಕ್ಕದ (Adrenal) ಅಂತಃಸತ್ವವು ಕಾಮಾಂಗಗಳ ರಕ್ತನಲಿಕೆಗಳನ್ನು ವಿಕಸಿತಗೊಳಿಸುವುದಲ್ಲದೆ ದೇಹ ಮನಸ್ಸುಗಳಲ್ಲಿ ಕಾಮಕ್ರೀಡೆಗೆ ಅವಶ್ಯವಾದ ಚೈತನ್ಯ ಚಟುವಟಿಕೆಗಳನ್ನು ಎಚ್ಚರಿಸುತ್ತದೆ.

ಆದ್ದರಿಂದ ಸ್ವರತಿಯ ಪರಿಣಾಮವನ್ನು ನಿರ್ಧರಿಸಬೇಕಾದರೆ ಓಜೋಗ್ರಂಥಿಗಳನ್ನು ನಾವು ಮಿಕ್ಕೆಲ್ಲ ಅಂಗಗಳಿಗಿಂತ ಹೆಚ್ಚಾಗಿ ಗಮನಿಸಬೇಕು. ಓಜೋಗ್ರಂಥಿಗಳು ದೈಹಿಕ ಮತ್ತು ಮಾನಸಿಕ ಎಂದು ಎರಡು ಮುಖಗಳುಳ್ಳುದಾಗಿದೆಯೆನ್ನಬಹುದು. ದೇಹದ ಬೆಳೆಗೆ ರೋಗ ನಿರೋಧಗಳನ್ನೂ ಮನಸ್ಸಿನ ಸ್ಥೈರ್ಯ, ಧೈರ್ಯ, ಶಾಂತಿ, ಬುದ್ಧಿಗಳನ್ನೂ ಓಜೋಗ್ರಂಥಿಗಳೇ ತೂಗಿಕೊಂಡು ಹೋಗುತ್ತಿರುತ್ತವೆ. ಆದರೆ ಕಾಮವೇದನೆಯಾದಾಗ ಅವು ಕ್ಷಣ ಹೊತ್ತು ಮಿಕ್ಕೆಲ್ಲ ಕರ್ತವ್ಯಗಳನ್ನು ಬದಿಗಿಟ್ಟು ಸಮಗ್ರ ದೇಹವನ್ನು ಕಾಮವಿಲಾಸಕ್ಕೆ ಅಣಿಮಾಡಬೇಕಾಗುತ್ತದೆ. ಕಾಮವಿಲಾಸವೂ ಸ್ತ್ರೀ ಪುರುಷರ ತನುಮನಗಳ ನೈಸರ್ಗಿಕ ಪ್ರವೃತ್ತಿಯಾಗಿದೆ. ಆದರೆ ನೈಸರ್ಗಿಕವಾದ ಪ್ರತಿಯೊಂದು ಪ್ರವೃತ್ತಿಗೂ ಕಾಲ ಮತ್ತು ಪ್ರಮಾಣಗಳ ಮಿತಿಯಿದೆಯೆಂಬುದನ್ನು ಮರೆಯಕೂಡದು. ಮಿತಿಯಿಂದ ಮಾಡಿದ ಪ್ರತಿಯೊಂದು ನಿಸರ್ಗಕ್ರಿಯೆಯಿಂದಲೂ ತನುಮನಗಳು ಶಾಂತಿ, ಪುಷ್ಟಿಗಳಿಂದ ಅಭ್ಯುದಯವನ್ನು ಹೊಂದುತ್ತವೆ. ಕಾಮವಿಲಾಸವೂ ಸಕಾಲದಲ್ಲಿ ಮತ್ತು ಸಪ್ರಮಾಣದಲ್ಲಿ ನಡೆದರೆ ಓಜೋಗ್ರಂಥಿಗಳ ಚಟುವಟಿಕೆಯ ಪರಿಣಾಮವಾಗಿ ಸ್ರವಿಸಿದ ಅಂತಃಶುಕ್ರದಿಂದ ಮೈಮನಗಳೆರಡೂ ಆರೋಗ್ಯ, ಆನಂದ, ಸೌಂದರ್ಯಗಳಿಂದ ನಳನಳಿಸುವವು. ಆದರೆ **ಅತಿ ಪ್ರಮಾಣದ ಮತ್ತು ಅಕಾಲದ ಕಾಮಲೀಲೆಗಳಿಂದ ಓಜೋಗ್ರಂಥಿಗಳಿಗೆ ಅತಿಯಾದ ದುಡಿತ ಬೀಳುವುದು.** ಕಾಮವಿಕಾರದ ಕಾಲದಲ್ಲಿ ಓಜೋಗ್ರಂಥಿಗಳು ಸಮಗ್ರ ಶರೀರವನ್ನು ಕಾಮಲೀಲೆಯ ಕಡೆಗೆ ಎಳೆಯುವುದರಿಂದ ಅತಿ ಸ್ವರತಿಯಿಂದ ಸದಾ ಕಾಲವೂ ಓಜೋಗ್ರಂಥಿಗಳು ಕಾಮಲೀಲೆಯ ಪ್ರವೃತ್ತಿಯನ್ನೇ (ನಿರಂತರವಾಗಿ ಸ್ವರತಿಯನ್ನು ಮಾಡಿಕೊಳ್ಳುವ ಒಲವನ್ನು) ಹುಟ್ಟಿಸಬಹುದು.

ಇದರಿಂದ ಓಜೋಗ್ರಂಥಿಗಳ ಮಿಕ್ಕ ಕಾರ್ಯಗಳಾದ ಮೈಮನಗಳ ಆರೋಗ್ಯ ವಿಕಾಸಗಳು ಹಿಂದೆ ಬೀಳಬಹುದು. ಒತ್ತಾಯದಿಂದ ಅವನ್ನು ಇತ್ತ ಕಾಮ ಲೀಲೆಗೂ, ಅತ್ತ ದೈಹಿಕ ಮಾನಸಿಕ ಸ್ವಾಸ್ಥ್ಯವಿಕಾಸಗಳಿಗೂ ತೊಡಗಿಸಿದರೆ ಬಹುಬೇಗ ಅವು ಸೋತು ಎರಡೂ ಕೆಲಸಗಳಲ್ಲಿ ಅಸಮರ್ಥವಾಗಿ ಕೂಡುವವು.

ಅಲ್ಲದೆ ಪಾಶ್ಚಾತ್ಯ ವಿಜ್ಞಾನಿಗಳ ಪ್ರಯೋಗಕ್ಕೆ ಇನ್ನೂ ಸಿಲುಕದ ಒಂದು ಸ್ವಭಾವವು ಈ ಓಜೋಗ್ರಂಥಿಗಳಲ್ಲಿದೆ. ಹಿಂದೆ ಹೇಳಿದಂತೆ ಕಾಮ ಜೀವನಕ್ಕೆ ಸಂಬಂಧಿಸಿದ ಓಜೋಗ್ರಂಥಿಗಳಲ್ಲಿ ಅಂತಃಶುಕ್ರ, ಬಹಿಃಶುಕ್ರವೆಂದು ಎರಡು ಬಗೆಯ ಸ್ರಾವಗಳಾಗುತ್ತವೆಂಬುದು ವಾಚಕರಿಗೆ ಗೊತ್ತಿದೆ ಅಂತಃಶುಕ್ರವು ಮನೋವಿಕಾಸಕ್ಕೆ ಸಾಧಕವಾಗುತ್ತದೆ. ಬಹಿಃಶುಕ್ರದಿಂದ ಹುಟ್ಟುವ ವೀರ್ಯ, ರಜಸ್ಸು ಮತ್ತು ಕಾಮೋದ್ದೀಪನವಾದಾಗ ಜನನೇಂದ್ರಿಯಗಳಿಂದ ಒಸರುವ ಕಾಮಜಲಗಳು, ಸಂತಾನೋತ್ಪತ್ತಿಗೂ ರತಿಕ್ರೀಡೆಗೂ ಸಾಧಕವಾಗುತ್ತವೆ. ಅಂತಃಶುಕ್ರ ಮತ್ತು ಬಹಿಃಶುಕ್ರಗಳು ಪರಸ್ಪರ ಪೂರಕವಾಗಿವೆ. ಅತಿಯಾದ ರತಿಲೀಲೆಗಳಿಂದ—ಅತಿಸಂಭೋಗ ಅಥವಾ ಅತಿಸ್ವರತಿಗಳಿಂದ—ಬಹಿಃಶುಕ್ರವನ್ನು ಹೆಚ್ಚಾಗಿ ಸ್ರವಿಸಿಕೊಂಡರೆ ಅಂತಃಶುಕ್ರವು ಕಡಿಮೆಯಾಗುವದು ತತ್ಪರಿಣಾಮವಾಗಿ ಮನೋಬುದ್ಧಿಗಳ ಕ್ರಿಯಾವಿಕಾಸಗಳಿಗೆ ತಡೆಯಾಗುತ್ತದೆ. ಧ್ಯಾನ, ಅನುಸಂಧಾನ, ಕಲಾನುಷ್ಠಾನಗಳಿಂದ ಅಂತಃಶುಕ್ರವನ್ನು ಹೆಚ್ಚಾಗಿ ಉಪಯೋಗಿಸಿಕೊಂಡವರಿಗೆ ಬಹಿಃಶುಕ್ರವು ಕಡಿಮೆಯಾಗುತ್ತದೆ. ತತ್ಪರಿಣಾಮವಾಗಿ ಅವರ ಕಾಮಶಕ್ತಿಯೂ ಕುಗ್ಗುತ್ತದೆ. ಗಹನವಾದ ವಿಷಯಗಳ ಅಭ್ಯಾಸ, ಸಂಶೋಧನಗಳಲ್ಲಿ ಸತತ ಕೆಲವು ತಿಂಗಳು ತೊಡಗಿ ನಂತರ ಸಂಭೋಗಿಸ ಹೋದರೆ ಲಿಂಗೋದ್ರೇಕವೆ ಆಗಲಿಲ್ಲವೆಂದು ಅನುಭವ ಹೊಂದಿದವರ ಉದಾಹರಣೆಗಳು ಬೇಕಾದಷ್ಟಿವೆ. "ವಿಜ್ಞಾನಿಗಳಿಗೆ ಸಂತಾನ ಕಡಿಮೆ; ಅತಿಸಂತಾನವಂತರಲ್ಲಿ ವಿಜ್ಞಾನಿಗಳು ಕಡಿಮೆ" ಎಂಬ ಮಾತಿನಲ್ಲಿ ಬಹಳ ತಥ್ಯವಿದೆ. ಆದರೆ ಅತಿಕಾಮವಿಲಾಸ, ಅತಿಬುದ್ಧಿವಿಲಾಸಗಳಿಂದ ಉಂಟಾಗುವ ಅಂತರ್ಬಹಿಃಶುಕ್ರಗಳಲ್ಲಿಯ ತೂಕಗೇಡಿತನವು ತಾತ್ಪೂರ್ತಿಕವಾದುದು. ಆಯಾ ವಿಲಾಸಗಳಿಗೆ ಕಡಿವಾಣ ಹಾಕಿ ಬೇಕಾದಾಗ ಶುಕ್ರಗಳಲ್ಲಿ ತೂಕವನ್ನು ತಂದುಕೊಳ್ಳಬಹುದು. ಸಾರಾಂಶ

ಅತಿಸ್ವರತಿಯಿಂದ ಬಹಿಃಶುಕ್ರವು ವಿಶೇಷವಾಗಿ ಸವಿಸಿ ಅಂತಃಶುಕ್ರವು ಕುಂದುತ್ತದೆ. ಅದರಿಂದ ಬುದ್ಧಿಮಾಂದ್ಯ, ಉದಾಸೀನತೆ, ಅಶಾಂತಿಗಳು ತಲೆದೋರಬಹುದು.

ಒಬ್ಬ ೨೨ ವರ್ಷ ವಯಸ್ಸಿನ ಯುವಕನು ಬರೆಯುತ್ತಾನೆ: "ನಾನು ಮೊದಲು ೪–೫ ವರ್ಷ ದಿನಾಲು ತಪ್ಪದೆ ೨–೩ ಸಲದಂತೆ ಮುಷ್ಟಿಮೈಥುನ ಮಾಡುತ್ತಿದ್ದೆನೆನ್ನಬಹುದು. ಇತ್ತೀಚೆ ಸ್ವರತಿಗಳು ಕಡಿಮೆಯಾಗಿದ್ದರೂ ಎರಡು ದಿನಕ್ಕೊಂದು ಸಲವಾದರೂ ಅದಾಗಲೇಬೇಕು. ನನ್ನ ಆರೋಗ್ಯವು ಚನ್ನಾಗಿದೆ. ಸ್ತ್ರೀಯರ ವಿಷಯಕ್ಕೆ ಆಕರ್ಷಣವೆನಿಸುತ್ತದೆ. ಈಗೆರಡು ತಿಂಗಳ ಹಿಂದೆ ನೆರೆಯ ಒಬ್ಬ ವಿವಾಹಿತ ತರುಣಿಯೊಡನೆ ಅವಳ ಒತ್ತಾಯದಿಂದ ಸಂಭೋಗಿಸಿದೆ. ಆಶ್ಚರ್ಯವೆಂದರೆ ನನಗೆ ಮುಷ್ಟಿಮೈಥುನದಲ್ಲಿ ಆದಷ್ಟು ಸುಖವು ಆ ಸಂಭೋಗದಿಂದ ಆಗಲಿಲ್ಲ. ಒಂದು ವಿಧದ ಬೇಸರುಂಟಾಯಿತು. ಸಂಭೋಗಕ್ಕಾಗಿ ಎಷ್ಟೋ ಗಂಡಾಂತರಗಳಲ್ಲಿ ಬೀಳುವ ಮನುಷ್ಯರು ಮೂರ್ಖರೆಂದು ನನಗೆನಿಸುತ್ತಿದೆ. ಮುಷ್ಟಿಮೈಥುನದಲ್ಲಿ ಸಂಭೋಗಕ್ಕಿಂತ ಹೆಚ್ಚು ಸುಖವಾದ ಮೇಲೆ ಮದುವೆಯು ಅಗತ್ಯವಾದರೂ ಏನು? ಈತ್ತೀಚೆ ನನ್ನ ಮಿತ್ರರು ನನಗೆ ಮದುವೆ ಮಾಡುವ ಹವ್ಯಾಸಕ್ಕೆ ಬಿದ್ದಿದ್ದಾರೆ. (ನನಗೆ ತಂದೆ ತಾಯಿಗಳಿಲ್ಲ; ದುಡ್ಡು ಬೇಕಾದಷ್ಟಿದೆ.) ನನಗೆ ಮದುವೆಯ ಹೆಸರೆತ್ತಿದರೆ ತಲೆಸೂಲೆ. ಇದೇನು ನಪುಂಸಕತೆಯ ಲಕ್ಷಣವೇ?........' ಇದೇ ಮಾದರಿಯಾಗಿ ಸ್ತ್ರೀಯರ ಉದಾರಣೆಗಳೂ ಉಂಟು. ಗಂಡನೊಡನೆ ಸಂಭೋಗಿಸಿ ತೃಪ್ತರಾಗದೆ ಪ್ರತಿಯೊಂದು ಸಂಭೋಗದ ನಂತರ ೧೦–೧೨ ಸಲ ಹಸ್ತಪ್ರಯೋಗವನ್ನು ಮಾಡಿಕೊಳ್ಳುತ್ತಿದ್ದ ತರುಣಿಯರ ಉದಾಹರಣೆಗಳನ್ನು ಡಾ ವಿಲ್ಹೆಲ್ಮ್ ಸ್ಟೇಕೆಲ್ಲನು ಕೊಟ್ಟಿದ್ದಾನೆ. ಹೀಗೆ ಸಂಭೋಗಕ್ಕಿಂತಲೂ ಸ್ವರತಿಯನ್ನು ಪ್ರೀತಿಸಲು ದೀರ್ಘಕಾಲದ ವರೆಗೆ ಸ್ವರತಿಯನ್ನು ಮಾಡಿಕೊಂಡುದೆ ಕಾರಣವೆಂದು ಮನೋವಿಜ್ಞಾನಿಗಳೆನ್ನುತ್ತಾರೆ. ಅದಕ್ಕೆ ಮನೋವಿಜ್ಞಾನದಲ್ಲಿ "ಅಭ್ಯಸ್ತವೃತ್ತಿ" (Fixation) ಎನ್ನುತ್ತಾರೆ. ಬಹುಕಾಲದವರೆಗೆ ವಿಶಿಷ್ಟ ಕಾರ್ಯದಿಂದ ತನುಮನಗಳು ಸುಖಪಟ್ಟರೆ ಮುಂದೆ ನೈಸರ್ಗಿಕ ಪ್ರವೃತ್ತಿಗಳಿಗಿಂತ 'ಅಭ್ಯಸ್ತವೃತ್ತಿ' ಗಳಲ್ಲಿಯೆ ಹೆಚ್ಚಿನ ಸುಖವಿದೆಯೆಂದು ಅನಿಸುತ್ತದೆ. ಇಂಥವರ ದಾಂಪತ್ಯ ಜೀವನವು ಸಾಕಷ್ಟು ಸುಖಕರವಾಗಲಾರದು.

ಸ್ವರತಿಯಲ್ಲಿ ಕಾಮಾಂಗಗಳು ಸಾಕಷ್ಟು ಉದ್ರಿಕ್ತವಾಗಿ ಆನಂದವಾಗ ಬೇಕಾದರೆ ಮನಸ್ಸಿನಲ್ಲಿ ಪ್ರಿಯ ಪ್ರಿಯೆಯರೊಡನೆ ಶೃಂಗಾರಲೀಲೆಯಾಡಿ ದಂತೆ ಅಥವಾ ಸಂಭೋಗಿಸಿದಂತೆ ಕಲ್ಪಿಸಿಕೊಳ್ಳಬೇಕಾಗುತ್ತದೆ. ಕಲ್ಪನಾ ಶಕ್ತಿಯು ವಿಶೇಷವಾಗಿರುವ ಸ್ವರತರ ಮಾನಸಿಕ ಪ್ರಿಯ ಪ್ರಿಯೆಯರು ಮೋಹಕವಾದ ರೂಪ ಹಾಗೂ ಪ್ರೇಮಾಭಿನಯಗಳಲ್ಲಿ ಆದರ್ಶ ಮೂರ್ತಿ ಗಳಾಗಿರುತ್ತಾರೆ. ಒಬ್ಬ ತರುಣಿಯ ಮಾನಸಿಕ ಪ್ರಿಯನ ರೂಪ, ಶೌರ್ಯ, ಸಬಲಶರೀರವು ಅಥವಾ ತರುಣನ ಮಾನಸಿಕ ಪ್ರಿಯೆಯ ಮೋಹಕವಾದ ರೂಪ, ಸ್ತನ, ಕೇಶ, ನಯನ, ಸ್ಮಿತಗಳು ನಿಜಪ್ರಪಂಚದಲ್ಲಿ ಸಿಗುವದು ಕಷ್ಟ. ಅಂಥ ಆದರ್ಶ ಪ್ರಿಯ ಪ್ರಿಯೆಯರೊಡನೆ ಮನಸಾ ಸಂಭೋಗಿಸುತ್ತ ರಮಿ ಸಿದ ಯುವತೀ ಯುವಕರಿಗೆ ಅಂಥ ಆದರ್ಶ ವ್ಯಕ್ತಿಗಳು ಪ್ರತ್ಯಕ್ಷವಾಗಿ ಸಿಕ್ಕರೆ ಅವರೊಡನೆ ಮದುವೆಯಾಗಿ ಸುಖವಾಗಿರಬಹುದು. ಆದರೆ ದುರ್ದೈವ ದಿಂದ ಕಾಲ್ಪನಿಕ ಪ್ರಿಯ ಪ್ರಿಯೆಯರ ಆದರ್ಶ ಸೌಂದರ್ಯಾಕರ್ಷಣಗಳು ನಿಜಲೋಕದಲ್ಲಿ ಸಿಗಲಾರವು. ಆದರಿಂದ ಅವರೊಡನೆ ಸಂಭೋಗಿಸುವಾಗ ಪುರುಷರಿಗೆ ಚನ್ನಾಗಿ ಉದ್ರೇಕವಾಗಲಿಕ್ಕಿಲ್ಲ; ಸ್ತ್ರೀಯರಿಗೆ ದ್ರಾವಣ ತೃಪ್ತಿ ಗಳು ಸಿಗಲಿಕ್ಕಿಲ್ಲ. ಇಂಥ ಸಂದರ್ಭದಲ್ಲಿ ಕೆಲವು ಸ್ತ್ರೀ ಪುರುಷರು ತಮ್ಮ ಪತಿ ಪತ್ನಿಯರೊಡನೆ ಸಂಭೋಗಿಸುವಾಗ ಮನಸ್ಸಿನಲ್ಲಿ ತಮ್ಮ ಆದರ್ಶ ಪ್ರಿಯರೊಡನೆ ಸಂಭೋಗಿಸುತ್ತಿರುವಂತೆ ಕಲ್ಪಿಸಿಕೊಳ್ಳುತ್ತಾರೆ. ಏನಾದ ರೊಂದು ಕಾರಣದಿಂದ ಆ ಕಲ್ಪನಾಭೋಗಕ್ಕೆ ತಡೆಯಾದರೆ ಅವರಿಗೆ ಸಂಭೋಗ ದಲ್ಲಿ ಎಷ್ಟೂ ಶಾಂತಿಸುಖಗಳು ಸಿಗವು.

**ಅತಿ ಸಂಭೋಗಕ್ಕಿಂತ ಅತಿ ಸ್ವರತಿಯು ಹೆಚ್ಚು ಅಪಾಯಕರ ವಾಗಬಹುದು.** ಏಕೆಂದರೆ ಸಂಭೋಗಕ್ಕೂ ಸ್ವರತಿಗೂ ಬಹಳ ಅಂತರ ವಿದೆ. ಸಹಜ ಸಂಭೋಗದಲ್ಲಿ ಪ್ರಿಯ ಪ್ರಿಯೆಯರ ಚುಂಬನಾಲಿಂಗನ ಗಳಿಂದ ಕಾಮಾಂಗಗಳು ಉದ್ರಿಕ್ತವಾಗುತ್ತವೆ. ಉದ್ರಿಕ್ತವಾದ ಕಾಮಕ್ಕೆ ಪ್ರಿಯವ್ಯಕ್ತಿಯ ಸಾಮಿಪ್ಯ ಪ್ರಣಯಗಳಿಂದ ಇನ್ನೂ ಪ್ರೋತ್ಸಾಹ ಸಿಗು ತ್ತದೆ. ನಂತರ ಸಂಭೋಗಿಸುವಾಗ ಪ್ರೇಮಿವ್ಯಕ್ತಿಯ ಉಲ್ಲಾಸ, ಪ್ರೇಮ ಗಳಿಂದ ಉತ್ಸಾಹಾನಂದಗಳು ಹೆಚ್ಚುತ್ತವೆ. ಕೊನೆಗೆ ಪುರುಷನಿಗೆ ವೀರ್ಯ ಸ್ಖಲನವಾದಾಗ, ಸ್ತ್ರೀಗೆ ದ್ರಾವಣವಾದಾಗ ಉಂಟಾಗುವ ಅವರ್ಣನೀಯ

ಆನಂದವನ್ನು ಪಾಲುಗೊಳ್ಳಲು ಪ್ರೇಮಿವ್ಯಕ್ತಿಯು ಹತ್ತರವೆ ಇರುತ್ತದೆ ಅಲ್ಲದೆ ಸಂಭೋಗದಲ್ಲಿ ಸ್ತ್ರೀ-ಪುರುಷರ ಜನನೇಂದ್ರಿಯಗಳಿಂದ ಸ್ರವಿಸಿದ ವೀರ್ಯಶ್ಲೇಷ್ಮಗಳಲ್ಲಿ ಪರಸ್ಪರರ ದೇಹಕ್ಕೆ ತುಷ್ಟಿ ಪುಷ್ಟಿಯನ್ನು ಕೊಡುವ ವಸ್ತುಗಳಿವೆಯೆಂದೂ ಅವನ್ನು ಪರಸ್ಪರ ಇಂದ್ರಿಯಗಳು ಹೀರಿಕೊಳ್ಳುವ ವೆಂದೂ ಡಾ. ಮಾರಿ ಸ್ಟೋಪ್ಸಳು ಹೇಳುತ್ತಾಳೆ ಒಟ್ಟಿನಲ್ಲಿ ಪೂರ್ಣವಾಗಿ ಬೆಳೆದ ತರುಣ ತರುಣಿಯರಿಗೆ ಸಹಜ ಸಂಭೋಗವು ಉತ್ಸಾಹದಾಯಕವೂ, ತುಷ್ಟಿ ಪುಷ್ಟಿದಾಯಕವೂ ಆಗುತ್ತದೆ ಆದರೆ ತದ್ವಿರುದ್ಧವಾಗಿ ಸ್ವರತರ ಗತಿಯನ್ನು ನೋಡಿರಿ ಕಾಮವಿಕಾರವೂ ಕಾಮಾಂಗಗಳ ಉದ್ರೇಕವೂ ಅವಾಸ್ತವ ಮಾನಸಿಕ ಕಲ್ಪನೆಗಳಿಂದ ಮತ್ತು ಇಂದ್ರಿಯ ಸಂಚಾಲನದಿಂದ ಮೊದಲುಗೊಳ್ಳುವವು. ಉದಿಕ್ತರಾದಾಗ ಅವರ ಉಲ್ಲಾಸವನ್ನು ಹೆಚ್ಚಿ ಸುವ ನಿಜ ಪ್ರಿಯ ಪ್ರಿಯೆಯರಿಲ್ಲ; ನಿರಾಶೆಯೆ ಅವರ ಆಗಿನ ಜೊತೆಗಾರ. ಸ್ಖಲನವಾದ ಮೇಲೂ ತಾವು ಒಬ್ಬರೇ ಒಬ್ಬರು! ಮನಸ್ಸಿನಿಂದ ಸ್ವರ್ಗೀಯ ಸುಂದರ ಸುಂದರಿಯೊಡನೆ ಕ್ಷಣಹೊತ್ತು ರಮಿಸಿದಂತೆ ಕಲ್ಪಿಸಿದರೂ ಸ್ಖಲಿಸಿ ಕಣ್ಣು ತೆರೆಯುವುದರೊಳಗೆ ನಿಜ ಪ್ರಪಂಚದ ಏಕಾಂಗಿತ್ವ! ಸಿಟ್ಟುಸಿರು! ಇವುಗಳೊಡನೆ "ನನ್ನ ರಕ್ತ ಹಾಳಾಯಿತು, ಜೀವನ ಹಾಳಾಯಿತು, ಓಜಸ್ಸು ಹಾಳಾಯಿತು" ಎಂಬ ದುಷ್ಪರಿಣಾಮಗಳ ಧ್ಯಾನ ಬೇರೆ ಸಹಜ ಸಂಭೋಗ ದಲ್ಲಿ ಕಾಮೇಂದ್ರಿಯಗಳಿಗೆ ಬಿದ್ದ ದುಡಿತದ ಶ್ರಮವು ತೃಪ್ತಿ, ಉತ್ಸಾಹಗಳಿಂದ ಕೂಡಲೆ ತುಂಬಿಬರುತ್ತದೆ ಸ್ವರತಿಯಲ್ಲಿ ಸುಖವು ಕ್ಷಣಿಕವಾದುದರಿಂದ ದುಡಿತದಿಂದಾದ ಕೊರತೆಯು ತುಂಬಿಬರಲಾರದು.

ಹೊಟ್ಟೆ ತುಂಬ ಸುಗ್ರಾಸ ಭೋಜನ ಮಾಡಿದವನಿಗೆ ಅದೆಲ್ಲ ಜೀರ್ಣ ವಾಗುವವರೆಗೆ ಆಹಾರದ ಮೇಲೆ ಆಶೆಯಿರುವುದಿಲ್ಲ. ಹಾಗೆಯೆ ಸಹಜ ಸಂಭೋಗದಲ್ಲಿ ತೃಪ್ತಿಯಾಯಿತೆಂದರೆ ಅದರಲ್ಲಿ ಅತಿರೇಕದ ಪ್ರವೃತ್ತಿ ಕಡಿಮೆ. ಆದರೆ ಸ್ವರತಿಯಲ್ಲಿ ಅತೃಪ್ತಿಯು ಬೆನ್ನುಹತ್ತಿರುವುದರಿಂದ ಎಷ್ಟು ಸಲ ಹಸ್ತ ಪ್ರಯೋಗವನ್ನು ಮಾಡಿಕೊಂಡರೂ ಸಾಲದೆನಿಸಿ ಪುನಃ ಪುನಃ ಅದೇ ಒಲ ವುಂಟಾಗುವದು. ಅಲ್ಲದೆ ಆದರಲ್ಲಿ ಮತ್ತೊಬ್ಬ ವ್ಯಕ್ತಿಯ ಸುಖ, ದುಃಖ, ಒಲವುಗಳ ಸಂಬಂಧವಿಲ್ಲದಿರುವುದರಿಂದಲೂ ತನ್ನ ದೇಹವು ತನ್ನ ಕೈಯಲ್ಲಿ

ರುವುವರಿಂದಲೂ "ಇದೊಂದೇ ಸಲ" ಎಂದು ಅದಕ್ಕೆ ಎಡೆ ಕೊಟ್ಟಂತೆ ಅದೊಂದು ಬಿಡಲಾರದ ಚಟವಾಗಿ ಕೊನೆಗೆ ಅತಿರೇಕವಾಗಿಬಿಡುವದು.

## ಸಾರಾಂಶ

ಸ್ವರತಿಯು ಚಿಕ್ಕ ಮಕ್ಕಳಲ್ಲಿ ವಿಶಿಷ್ಟ ಕಾರಣಗಳ ಮೂಲಕ ನೈಸರ್ಗಿಕವಾಗಿ ಕಂಡುಕೊಳ್ಳುವದು. ಆದರೆ ಆಗಿನ ಸ್ವರತಿಯು ಕೇವಲ ದೇಹಕ್ಕೆ ಹೊಂದಿಕೊಂಡಿರುತ್ತದೆ ಉದ್ದೇಶಪೂರ್ವಕವಾಗಿ ಮಕ್ಕಳು ಅದನ್ನು ಮಾಡಿಕೊಳ್ಳುವದಿಲ್ಲ ಆದ್ದರಿಂದ ಅತಿರೇಕದ ಭಯವಿಲ್ಲ. ಆಗ ಕಾಮುಕ ಕಲ್ಪನೆಗಳಾಗಲಿ, ವೀರ್ಯಶ್ಲೇಷ್ಮಗಳ ಸ್ಖಲನಗಳಾಗಲಿ ಇಲ್ಲದಿರುವುದರಿಂದ ಓಜೋಗ್ರಂಥಿಗಳ ಮೇಲೂ ಆ ಸ್ವರತಿಯ ಪರಿಣಾಮವಾಗಲಾರದು. ಅಲ್ಲದೆ ಶೈಶವಾವಸ್ಥೆಯಿಂದ ಬಾಲ್ಯಾವಸ್ಥೆಗೆ ಹೋದ ಮೇಲೆ ನೈಸರ್ಗಿಕವಾಗಿಯೆ ಸ್ವರತಿಯು ಮಾಯವಾಗುವುದಾದದುರಿಂದ ಚಿಕ್ಕ ಮಕ್ಕಳ ಸ್ವರತಿಯು ನಿರಪಾಯಕಾರಿಯೆಂದು ಬಹುಶಃ ಎಲ್ಲ ಕಾಮವಿಜ್ಞಾನಿಗಳೂ ಸಿದ್ಧಾಂತವನ್ನು ತೆಗೆದಿದ್ದಾರೆ

ಕೌಮಾರಾವಸ್ಥೆಯಿಂದ ಮೇಲ್ಗಡೆ ಹುಟ್ಟಿಕೊಳ್ಳುವ ಸ್ವರತಿಯು ಕಾಮೋದಯದ ಲಕ್ಷಣವಾಗಿದೆಯಾದುದರಿಂದ ಅದು ಕೂಡ ನೈಸರ್ಗಿಕವೆ ಸರಿ ಆದ್ದರಿಂದಲೆ ನೂರಕ್ಕೆ ನೂರು ಜನ ಸ್ತ್ರೀಪುರುಷರೂ ಒಮ್ಮೆಲ್ಲೊಮ್ಮೆ-ಯಾದರೂ ಸ್ವರತಿಯನ್ನು ಮಾಡಿಕೊಂಡಿದ್ದಾರೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ ಆದರೆ ನಮ್ಮ ಸಾಮಾಜಿಕ, ನೈತಿಕ ಪರಿಸ್ಥಿತಿಯ ಹಲಕೆಲವು ಕಾರಣಗಳ ಮೂಲಕ ಅದರಲ್ಲಿ ಅತಿರೇಕವಾಗುವ ಸಂಭವವಿದೆ ಮತ್ತು ಸ್ವರತಿಯಲ್ಲಿ ಅತಿರೇಕವಾದರೆ ಅದರಲ್ಲಿ ಕಾಮಾಂಗಗಳಿಗೆ ಅತಿ ದುಡಿತ ಬಿದ್ದು, ಓಜೋಗ್ರಂಥಿಗಳು ಮಿತಿಮೀರಿ ಶ್ರಮಿಸಿ, ಮನಸ್ಸು ಅವಾಸ್ತವ ವಿಲಾಸಗಳಲ್ಲಿ ರಮಿಸುವ ಚಟವುಳ್ಳದ್ದಾಗಿ ದೇಹ-ಮನಸ್ಸುಗಳೆರಡರ ಮೇಲೂ ಕೆಲವು ದುಷ್ಪರಿಣಾಮಗಳಾಗುವವು. ಮಿತವಾದ ಸ್ವರತಿಯಿಂದ ಖಂಡಿತವಾಗಿ ಯಾರ ಮೇಲೂ ದುಷ್ಪರಿಣಾಮವಾದುದು ಕಂಡುಬಂದಿಲ್ಲವೆಂದು ವಿಜ್ಞಾನಿಗಳು ಅಸಂಖ್ಯ ವ್ಯಕ್ತಿಗಳ ಪರೀಕ್ಷಣ, ಸಂಶೋಧನಗಳಿಂದ ನಿರ್ಧರಿಸಿದ್ದಾರೆ ಆದರೆ ಅತಿ ಯಾವುದು ? ಮಿತಿ ಯಾವುದು? ಎಂಬುದನ್ನು ನಿರ್ಧರಿಸುವುದಕ್ಕೆ (೧) ಸ್ವರತಿಯನ್ನು ಆರಂಭಿಸಿದ ವಯಸ್ಸು (೨) ಒಟ್ಟು ಎಷ್ಟು ಅವಧಿಯವರೆಗೆ ಸ್ವರತಿಯು ಅವಿಚ್ಛಿನ್ನವಾಗಿ ಸಾಗಿತು (೩) ದಿನಕ್ಕೆ ಎಷ್ಟು ಸಲ (೪) ಸ್ವರತಿಯ ಕ್ರಮ

ವಾವುದು (೫) ಸ್ವರತಿಯನ್ನು ಮಾಡಿಕೊಳ್ಳುವಾಗ ಮಾನಸಿಕ ಭಾವನೆಗಳು ಏನಿಪ್ಪವು ಎಂಬ ಐದು ಮಾತುಗಳನ್ನು ಯೋಚಿಸಬೇಕಾಗುವುದು.

೧. ಕಾಮಾಂಗಗಳು ಪರಿಪಕ್ವಾವಸ್ಥೆಗೆ ಬಂದನಂತರ ಸ್ವರತಿಯನ್ನು ಆಚರಿಸಿದರೆ ವಿಶೇಷ ಕೆಟ್ಟ ಪರಿಣಾಮವಾಗಲಾರದು. ಕಾಮಾಂಗಗಳು ಪರಿಪೂರ್ಣಾವಸ್ಥೆಗೆ ಬರುವುದೆಂದರೆ ಇಡಿ ದೇಹವೆ ಪರಿಪೂರ್ಣಾವಸ್ಥೆಗೆ ಬಂದಂತೆ. ಆಗ ಓಜೋಗ್ರಂಥಿಗಳ ಸತ್ವವು ತನುಮನಗಳ ಪೋಷಣಾಭಿವೃದ್ಧಿಗೆ ಸಾಕಷ್ಟು ಆಗಿ ಕಾಮವೃತ್ತಿ ಪ್ರವೃತ್ತಿಗಳಿಗೂ ಪ್ರೇರಣೆಯನ್ನು ಹುಟ್ಟಿಸುತ್ತದೆ ಆದರೆ ಅನೇಕ ಹುಡುಗ ಹುಡುಗಿಯರು ಹಿಂದೆ ವಿವರಿಸಿದ ವಿವಿಧ ಕಾರಣಗಳ ಮೂಲಕ ಮತ್ತು ಕಾಮೋದ್ರೇಕಕರವಾದ ಪರಿಸ್ಥಿತಿಯ ಪ್ರಭಾವದಿಂದ ತೀರ ಚಿಕ್ಕಂದಿನಲ್ಲಿಯೆ ಸ್ವರತಿಯನ್ನಾರಂಭಿಸುತ್ತಾರೆ ಡಾ. ಕ್ಯಾಥೆರಿನ್ ಡೇವಿಯು ೧೦೦೦ ಮದುವೆಯಾಗದ ಕಾಲೇಜ್ ಯುವತಿಯರನ್ನು ಪ್ರಶ್ನಿಸಿ ಅವರಲ್ಲಿ ನೂರಕ್ಕೆ ೪೩ ಹುಡುಗಿಯರು ೩ ರಿಂದ ೧೦ ವರ್ಷದೊಳಗಾಗಿ ಸ್ವರತಿಯನ್ನು ಪ್ರಾರಂಭಿಸಿದರೆಂದು ಕಂಡುಹಿಡಿದಿದ್ದಾಳೆ. ಪ್ರೊ. ಹ್ಯಾವ್‌ಲೊಕ್ ಎಲಿಸನು ವಿವಿಧ ವಿಜ್ಞಾನಿಗಳ ಸಿದ್ಧಾಂತ, ಅನುಭವಗಳನ್ನು ಕ್ರೋಢೀಕರಿಸಿ ಈ ಕೋಷ್ಟಕವನ್ನು ತಯಾರಿಸಿದ್ದಾನೆ :—

| ವರ್ಷಗಳವರೆಗೆ | | ಹುಡುಗರು | ಹುಡುಗಿಯರು |
|---|---|---|---|
| ೧೧ | ನೂರಕ್ಕೆ | ೨೦·೯ | ೪೯ ೧ |
| ೧೨–೧೪ | ,, | ೪೪ ೩ | ೧೪·೬ |
| ೧೫–೧೭ | ,, | ೩೦ ೩ | ೬ ೨ |
| ೧೮ ಮತ್ತು ನಂತರ | ,, | ೪ ೫ | ೩೦·೧ |

ಮೇಲಿನ ಅಂಕೆಗಳಿಂದ ಮೊದಲಿನ ಹನ್ನೊಂದು ವರ್ಷಗಳವರೆಗೆ ಹುಡುಗರಿಗಿಂತ ಹುಡುಗಿಯರಲ್ಲಿ ಹೆಚ್ಚಾಗಿ ಸ್ವರತಿಯ ಅಭ್ಯಾಸವಿದೆಯೆಂದೂ, ಹನ್ನೆರಡರಿಂದ ಹದಿನೇಳು ವರ್ಷಗಳ ವರೆಗೆ ಹುಡುಗರಲ್ಲಿ ಆ ಚಟವು ಹೆಚ್ಚು ಆಗುವುದೆಂದೂ, ಹದಿನೆಂಟು ವರ್ಷ ವಯಸ್ಸಿನ ನಂತರ ಪುನಃ ಹುಡುಗಿಯರಲ್ಲಿ ಅದು ಹೆಚ್ಚುವುದೆಂದೂ ವ್ಯಕ್ತವಾಗುವುದು ನಮಗೆ ಈವರೆಗೆ ಬಂದ ಪತ್ರಗಳಿಂದಲೂ ಇದೆ ಮಾತು ಸಿದ್ಧವಾಗುತ್ತದೆ ಬಹುಶಃ ೯–೧೨ ವರ್ಷಗಳೊಳಗಾಗಿ ಸ್ವರತಿಯನ್ನು ಪ್ರಾರಂಭ ಮಾಡಿದವರೆ ವಿಶೇಷವಾಗಿದ್ದಾರೆ. ಅಷ್ಟು

ಚಿಕ್ಕ ವಯಸ್ಸಿನಲ್ಲಿ ದೇಹ-ಧಾತುಗಳು ಇನ್ನೂ ಬಲಿತಿರುವುದಿಲ್ಲ. ಓಜಃಸತ್ವ ಗಳು ಬೆಳಿಗೆ ಮತ್ತು ಮಿದುಳಿನ ವಿಕಾಸಕ್ಕೆ ಅತ್ಯಾವಶ್ಯಕವಾಗಿರುತ್ತವೆ. ಆಗಿನಿಂದಲೆ ಸ್ವರತಿಯನ್ನಾಚರಿಸಿದರೆ ಬಹಿಃಶುಕ್ರವು ಹೆಚ್ಚಾಗಿ ಸ್ರವಿಸಿ ಅಂತಃ ಶುಕ್ರದ ಪ್ರಮಾಣವು ಕಡಿಮೆಯಾಗುವುದು. ಅದರಿಂದ ಮಿದುಳು ಮತ್ತು ದೇಹಧಾತುಗಳ ಬೆಳಿಗೆ ಸರಿಯಾಗಿ ಆಗದೆ ಜೀವನವು ಸಕಾಲದಲ್ಲಿ ವಿಕಸಿತ ವಾಗುವುದಿಲ್ಲ. ಆಗಲೆ ಸ್ವರತಿಯು ಅತಿರೇಕವಾದರೆ ಸಮಸ್ತ ಓಜಃಸತ್ವಗಳ ಮಿಶ್ರಣದಿಂದ ಸಿದ್ಧವಾಗುವ ಓಜಸ್ಸು (ರೋಗನಿರೋಧಕ ಶಕ್ತಿ) ಕುಗ್ಗಿ ಚಿಕ್ಕಂದಿ ನಲ್ಲಿಯೆ ದೇಹದ ನರಮಂಡಲವು ತತ್ತರಿಸಿ ಬೇನೆಗಳು ಕಾಲು ಚಾಚಲು ಅನುವಾಗುವುದು.

೨. ಸ್ವರತರಲ್ಲಿ ತಾರುಣ್ಯದ ಉದ್ರೇಕೋದಯವಾದ ಹೊಸ ಹುರುಪಿನಲ್ಲಿ ಕೆಲವು ದಿನ ಅಥವಾ ವಾರಗಳ ವರೆಗೆ ಮುಷ್ಟಿಮೈಥುನವನ್ನು ಮಾಡಿಕೊಂಡು ನಂತರ ಯಾವುದಾದರೊಂದು ಕಾರಣದಿಂದ ಅದನ್ನು ಬಿಟ್ಟುಕೊಟ್ಟವರೂ ಇದ್ದಾರೆ; ಚಿಕ್ಕಂದಿನಲ್ಲಿಯೆ ಆರಂಭಿಸಿ ಮುಂದೆ ಮುದುಕರಾದವರಿದ್ದಾರೆ. ಈ ಅವಧಿಯು ಹೆಚ್ಚಾದ ಹಾಗೆ ಮನಸ್ಸಿನಲ್ಲಿ ಹಸ್ತಪ್ರಯೋಗದ ಪ್ರವೃತ್ತಿಯು ಚೆನ್ನಾಗಿ ಬೇರೂರುತ್ತ ಹೋಗುವುದು. ಮದುವೆಗೆ ಬಹು ಪೂರ್ವ ವಯಸ್ಸಿ ನಿಂದ ಮುಷ್ಟಿಮೈಥುನ ಮಾಡಿಕೊಳ್ಳುತ್ತ ಬಂದವರಿಗೆ ಬಹುಶಃ ಮದುವೆ ಯಾದ ನಂತರವೂ ಅದನ್ನು ಬಿಡಲಾಗುವುದಿಲ್ಲ. ಮತ್ತು ಮುಷ್ಟಿಮೈಥುನವು ಅವರಿಗೆ ಸಂಭೋಗಕ್ಕಿಂತ ಹೆಚ್ಚು ಸುಖಕರವೆನಿಸುವುದರಿಂದ ಅವರಿಗೆ ಸಂಭೋಗದಲ್ಲಿ ಸಾಕಷ್ಟು ಉತ್ಸಾಹವಿಲ್ಲದೆ ಇಂದ್ರಿಯದ ಉದ್ರೇಕವೂ ಬಲವಾಗಿ ಆಗುವುದಿಲ್ಲ. ಅದರಿಂದ ತಾವು ನಪುಂಸಕರಾಗಿರುವರೆಂಬ ಭೀತಿಯಿಂದ ಸಂಭೋಗದ ಸರತಿಗಳನ್ನು ಕಡಿಮೆಮಾಡುವರು. ದಾಂಪತ್ಯದಲ್ಲಿ ಸಂಭೋಗವು ಕಾಲಕಾಲಕ್ಕೆ ನಡೆಯದಿದ್ದಾದರೆ ಗಂಡಹೆಂಡರ ಮಾನಸಿಕ ಸಾಮರಸ್ಯವು ಕೈಗೂಡುವುದಿಲ್ಲ. ಹೆಚ್ಚು ಕಾಲದ ವರೆಗೆ ಸ್ವರತಿಯನ್ನು ಮಾಡಿಕೊಂಡರೆ ಮದುವೆಯ ಅಪೇಕ್ಷೆಯು ತಪ್ಪುತ್ತದೆ. **ದೊಡ್ಡ ವೇದಾಂತದ ಮಾತು ಗಳನ್ನಾಡುತ್ತ ಗೃಹಸ್ಥಾಶ್ರಮಿಗಳಿಗೆ ತಲೆಭಾರವಾಗಿ ತಿರುಗುತ್ತಿರುವ ಬ್ರಹ್ಮಚಾರಿ, ಬ್ರಹ್ಮಚಾರಿಣಿಯರಲ್ಲಿ ಬಹುತರರು ಸ್ವರತಿಯಿಂದ ನೈಸ ರ್ಗಿಕ ರತಿಯ ಅಭಿರುಚಿಯನ್ನು ಕಳೆದುಕೊಂಡವರಾಗಿರುತ್ತಾರೆ.**

ಮುಷ್ಟಿಮೈಥುನವೆ ಅವರಿಗೆ ಅಭ್ಯಸ್ತವೃತ್ತಿಯಾದುದರಿಂದ ಅವರ ಕಾಮು ಜೀವನವು ಅದರಲ್ಲಿಯೆ ಕೇಂದ್ರಿತವಾಗಿರುತ್ತದೆ ಆದರೆ ಅದು ನಿರಾಶೆ, ನಿಟ್ಟುಸಿರು. ನಪುಂಸಕತೆಯ ಭೀತಿಯಿಂದ ಸುತ್ತುವರಿದಿರುವುದರಿಂದ ಜೀವನದ ಮಿಕ್ಕ ಸಾಹಸದ, ಉತ್ಪಾದಕ ಕರ್ತವ್ಯಗಳ ಕಡೆಗೆ ಅವರಿಗೆ ಸಾಕಷ್ಟು ಮನಸ್ಸು ಹರಿಯುವುದಿಲ್ಲ

೩ ಬಹುಶಃ ಸ್ವರತಿಯು ತೋರಿಕೊಳ್ಳುವಾಗ ಹುಡುಗ ಹುಡುಗಿಯರು ಇನ್ನೂ ಅಜ್ಞಾನಿಗಳಾಗಿರುತ್ತಾರೆ ಈಗಿನ ಶಿಕ್ಷಣ ಕ್ರಮದಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ತಮ್ಮ ದೇಹದ ವಿಕಾಸ, ಆರೋಗ್ಯಗಳ ಅರಿವು ಕೊಂಚವೂ ಇರುವುದಿಲ್ಲ ಅಂತಹ ಪರಿಸ್ಥಿತಿಯಲ್ಲಿ ಅಂಟಿಕೊಂಡ ಸ್ವರತಿಯ ಪರಿಣಾಮವು ದೇಹಮನಸ್ಸುಗಳ ಮೇಲೆ ಯಾವ ರೀತಿಯಿಂದಾಗುವದೆಂಬುದು ಚಿಕ್ಕವರಿಗೆ ಗೊತ್ತಿರುವುದಿಲ್ಲ ಆದರೆ ಆ ಅಭ್ಯಾಸವು ತಾತ್ಕಾಲಿಕವಾದ ಆನಂದವನ್ನು ಕೊಡುವುದರಿಂದ ಅದರಲ್ಲಿ ಮಿತಿಯೂ ಉಳಿಯುವುದಿಲ್ಲ. ದಿನಕ್ಕೆ ಒಂದು, ಎರಡು, ಐದಾರು ಸಲದಂತೆ ಹಲವು ವರ್ಷಗಳ ವರಗೆ ತಪ್ಪದೆ ಮುಷ್ಟಿಮೈಥುನವನ್ನು ಮಾಡಿಕೊಂಡವರಿದ್ದಾರೆ ನಂತರ ಅವರ ಕೈಗೆ ಸಿಕ್ಕ ಪುಸ್ತಕಗಳಲ್ಲಿ, ಮುಷ್ಟಿಮೈಥುನವು ಬಹು ಭಯಂಕರ ದುಷ್ಪರಿಣಾಮಕಾರಿಯಾದುದೆಂದೂ ಕಳೆದುಕೊಂಡ ಅಮೌಲ್ಯವಾದ ವೀರ್ಯವನ್ನು ತಿರುಗಿ ಗಳಿಸುವುದು ಈ ಜನ್ಮದಲ್ಲಿ ಸಾಧ್ಯವಿಲ್ಲವೆಂದೂ ಕ್ಷಯ, ಹುಚ್ಚು, ಅರ್ಧಾಂಗವಾತ, ಅಪಸ್ಮಾರ, ನಪುಂಸಕತೆಗಳು ಮುಷ್ಟಿಮೈಥುನದ ಪರಿಣಾಮಗಳೆಂದೂ ಮುಷ್ಟಿಮೈಥುನಿಗಳಿಗೆ ಊನ, ದೀನ ಮಕ್ಕಳು ಹುಟ್ಟುವರೆಂದೂ ಭೀಕರವಾಗಿ ವರ್ಣಿಸಿರುವುದರಿಂದ ಅವರ ಮನೋಬಲವು ಕುಸ್ಸಳಿಸಿ ಸ್ವರತಿಯನ್ನು ಕಡಿಮೆ ಮಾಡಿಕೊಳ್ಳುವ ಅವರ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಜೀವಿಸುವ ಆಸೆಯನ್ನು ಕೂಡ ಕೆಲವರು ತೊರೆಯುತ್ತಾರೆ. ಇಲ್ಲದ ರೋಗಗಳೆಲ್ಲ ಅವರಲ್ಲಿ ತೋರಹತ್ತುತ್ತವೆ ವಸ್ತುತಃ ಮನದ ಅಂಜಿಕೆಯೆ ಆ ದುಷ್ಪರಿಣಾಮಕ್ಕೆ ಕಾರಣವೆಂದು ಸ್ಪಷ್ಟವಾಗುವದು. “ದಿನಕ್ಕೆ ೩–೪ ಸಲದಂತೆ ೬–೭ ವರ್ಷ ಮುಷ್ಟಿಮೈಥುನ ಮಾಡಿಕೊಂಡರೂ ನಾನು ಸುದೃಢನಾಗಿದ್ದೇನೆ, ಆರೋಗ್ಯವೂ ಚೆನ್ನಾಗಿದೆ. ಆದರೆ ನನಗೆ ಮೂಲವ್ಯಾಧಿಯ ತೊಂದರೆ ಬಹಳವಾಗಿದೆ. ಅದು ಮುಷ್ಟಿಮೈಥುನದ ಪರಿಣಾಮವಾಗಿರಬಹುದೇ?” ಎಂಬಂತಹ

ಪತ್ರಗಳೂ ನಮಗೆ ಬೇಕಾದಷ್ಟು ಬಂದಿವೆ ಡಾ. ಹರ್ಶಫೀಲ್ಡ್‌ನಲ್ಲಿ ಬಂದ ಒಬ್ಬ ರೋಗಿಯು ದಿನಕ್ಕೆ ೬೦ ಸಲ ಮುಷ್ಟಿಮೈಥುನವನ್ನು ಮಾಡಿಕೊಳ್ಳು ತ್ತಿದ್ದನಂತೆ. ಅವನ ವಯಸ್ಸು ೨೩ ವರ್ಷ. ಅಷ್ಟು ಹೆಚ್ಚಾಗಿ ಸ್ವರತಿಯನ್ನು ಆಚರಿಸಿದರೂ ಪ್ರಾರಂಭದಲ್ಲಿ ಯಾವ ದುಷ್ಪರಿಣಾಮವೂ ಕಾಣದ್ದರಿಂದ ಅವನೊಂದು ಯುಕ್ತಿಯನ್ನು ಮಾಡಿದ್ದನು. ಮಲಗುವಾಗ ಲಿಂಗವನ್ನು ಒಂದು ವಿದ್ಯುತ್ತಿನ ಸಾಧನದ ಹತ್ತರ ಇಟ್ಟುಕೊಳ್ಳುತ್ತಿದ್ದನು ಅವನಿಗೆ ನಿದ್ದೆ ಬಿದ್ದಾಗ ಇಂದ್ರಿಯವು ಉದ್ರೇಕವಾದರೆ ಆ ಸಾಧನವು ಗಂಟೆ ಬಾರಿಸುತ್ತಿತ್ತು. ಕೂಡಲೆ ಎದ್ದು ಅವನು ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತಿದ್ದನಂತ "ನನ್ನ ಸಂಶೋಧನದಲ್ಲಿ ನೂರಕ್ಕೆ ೩೯ ಮಂದಿ ವಾರಕ್ಕೆ ಎರಡು ಸಲಕ್ಕಿಂತ ಹೆಚ್ಚಾಗಿಯೆ ಮುಷ್ಟಿಮೈಥುನವನ್ನು ಮಾಡಿಕೊಳ್ಳುತ್ತಾರೆ; ೬೧ ಮಂದಿ ಎರಡು ಸಲಕ್ಕಿಂತ ಕಡಿಮೆ ಮಾಡಿಕೊಳ್ಳುತ್ತಾರೆ" ಎಂದು ಅದೇ ಡಾಕ್ಟರನು ಅಂದಿದ್ದಾನೆ. ನಮಗೆ ಈವರೆಗೆ ಬಂದ ಕಾಗದಗಳಿಂದ ದಿನಕ್ಕೆ ಒಂದೆರಡು ಸಲದಂತೆ ೧–೨ ವರ್ಷಗಳವರೆಗೆ ಹಸ್ತಪ್ರಯೋಗ ಮಾಡಿಕೊಳ್ಳುವವರೆ ಹೆಚ್ಚಾಗಿದ್ದಾರೆಂದೆನಿಸುವುದು. ಅದರಲ್ಲಿ ಬಹುತರರು ತಮ್ಮ ಪಾಚಕಾಂಗ, ರಕ್ತ, ಜ್ಞಾಪಕ ಶಕ್ತಿಯ ದೌರ್ಬಲ್ಯವುಳ್ಳವರಾಗಿದ್ದಾರೆ. ನಮಗೆ ಬಂದಿರುವ ಸಾವಿರಾರು ಪತ್ರಗಳಲ್ಲಿ ಮುಷ್ಟಿಮೈಥುನದಿಂದ ನಪುಂಸಕರೂ, ಹುಚ್ಚರೂ ಆದವರು ಯಾರೂ ಕಂಡುಬಂದಿಲ್ಲ. ಆದರೆ ದಿನದ ಸ್ವರತಿಯು ಸರತಿಗಳು ಹೆಚ್ಚಾದಂತೆ ಆಯಾಸ, ನಿರಾಸೆ, ಅಗ್ನಿಮಾಂದ್ಯ, ಮಲಬದ್ಧತೆಗಳು ವಿಶೇಷವಾಗಿ ಪೀಡಿಸುವವೆಂದು ಸಿದ್ಧವಾಗಿದೆ; ಮತ್ತು ದಿನಕ್ಕೆ ಕೆಲವು ಸಲದಂತೆ ಹಲವು ವರ್ಷಗಳವರೆಗೆ ಹಸ್ತಪ್ರಯೋಗ ಮಾಡಿಕೊಂಡರೆ ತಾತ್ಪೂರ್ತಿಕವಾದ ನಪುಂಸಕತೆಯೂ, ಲಿಂಗಶೈಥಿಲ್ಯವೂ, ಶೀಘ್ರಸ್ಖಲನವೂ, ದೇಹದಲ್ಲಿ ಕಾವೂ, ಚರ್ಮದ ತೇಜೋಹೀನತೆಯೂ ಉಂಟಾಗಬಹುದೆಂದು ಸುಪ್ರಸಿದ್ಧ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ.

೪. ಸ್ವರತಿಯ ಪರಿಣಾಮವು ಸ್ವರತನು ಅನುಸರಿಸುವ ವಿಶಿಷ್ಟಕ್ರಮವನ್ನೂ ಅವಲಂಬಿಸಿದೆ. ಕಾಮಾತಿರೇಕದಿಂದ ಕೆಲವು ತರುಣರು ಮುಷ್ಟಿಯಿಂದ ಲಿಂಗವನ್ನು ಬಹು ಬಿಗುವಾಗಿ ಹಿಡಿದುಕೊಂಡು ಸಂಚಾಲಿಸುವುದುಂಟು ರಕ್ತಸಂಚಿತವಾಗಿ ಉದ್ರಿಕ್ತವಾದ ಲಿಂಗವನ್ನು ಬಿಗಿಯಾಗಿ ಹಿಡಿಯುವದ

ರಿಂದ ಒಳಗಿನ ಸೂಕ್ಷ್ಮ ರಕ್ತನಲಿಕೆಗಳು ಒಡೆದುಹೋಗಬಹುದು ಸ್ನಾಯು ಗಳು ದುರ್ಬಲವಾಗಿ ಲಿಂಗವು ಡೊಂಕಾಗಬಹುದು. ಹೊಟ್ಟೆ ಕೆಳಗೆ ಮಾಡಿ ಮಲಗಿ ಲಿಂಗವನ್ನು ನೆಲಕ್ಕೆ ಇಲ್ಲವೆ ಹಾಸಿಗೆಗೆ ಘರ್ಷಿಸುವದರಿಂದ ಮೇಲಿನ ಅಪಾಯಗಳೆ ಆಗುವ ಸಂಭವವಿದೆ ಬಿರುಸಾದ ವಿವಿಧ ವಸ್ತುಗಳ ರಂಧ್ರ ಗಳನ್ನು ಸ್ವರತಿಗಾಗಿ ಉಪಯೋಗಿಸುವದರಿಂದಲೂ ಲಿಂಗದ ಆಕಾರ ಶಕ್ತಿ ಗಳಿಗೆ ಧಕ್ಕೆಯಾಗುವದು ಸ್ತ್ರೀಯರು ಸ್ವರತಿಯಲ್ಲಿ ಯೋನಿ, ಚಂದ್ರನಾಡಿ, ಮೂತ್ರಮಾರ್ಗಗಳ ಘರ್ಷಣಕ್ಕಾಗಿ ಉಪಯೋಗಿಸುವ ಬಿರುಸು ವಸ್ತು ಗಳಿಂದಲೂ ಅಪಾಯವಾದ ಉದಾಹರಣೆಗಳಿವೆ. ಸ್ತ್ರೀಯರ ಯೋನಿ ಮತ್ತು ಮೂತ್ರಮಾರ್ಗಗಳಲ್ಲಿ ಸಣ್ಣ ವಸ್ತುಗಳನ್ನು ಒಳಗೆ ಹೀರಿಕೊಳ್ಳುವ ಸ್ವಭಾವ ವಿದೆಯಾದ್ದರಿಂದ ಸ್ವರತಿಯ ಕಾಲಕ್ಕೆ ಉಪಯೋಗಿಸಿದ ವಸ್ತುಗಳು ಗರ್ಭಾ ಶಯ, ಮೂತ್ರಾಶಯಗಳಲ್ಲಿ ಸೇರಿ ಅಲ್ಲಿ ದುರ್ವ್ರಣಗಳಾಗುವ ಸಂಭವವಿದೆ ಯೆಂದು ಹಿಂದೆ ಹೇಳಿದೆ. ಕಾಮಾತಿರೇಕದಿಂದ ಒಮ್ಮೆಲೆ ಲಿಂಗವನ್ನು ತೀವ್ರ ವಾಗಿ ಘರ್ಷಿಸಿಕೊಂಡು ಕೂಡಲೆ ವೀರ್ಯಸ್ಖಲನ ಮಾಡಿಕೊಳ್ಳುವುದರಿಂದ ಅದೆ ಚಟವಾಗಿ ಮುಂದೆ ದಾಂಪತ್ಯದಲ್ಲಿ ಸಂಭೋಗಿಸುವಾಗ ಹೆಚ್ಚು ಹೊತ್ತು ವೀರ್ಯಧಾರಣ ಮಾಡಲಾಗದೆ ಶೀಘ್ರಸ್ಖಲನದಿಂದ ಬಳಲಬೇಕಾಗುತ್ತದೆ. ಹಸ್ತಪ್ರಯೋಗ ಕಾಲವಲ್ಲಿ ತೀವ್ರವಾಗಿ ಲಿಂಗವನ್ನು, ಯೋನಿಯನ್ನು ಘರ್ಷಿಸಿ ಕೊಳ್ಳುವುದರಿಂದ ಬಿರಿಮೂತ್ರವುಂಟಾಗುತ್ತದೆ.

೫. ಆಧುನಿಕ ಕಾಮವಿಜ್ಞಾನದ ಪಂಡಿತರೆಲ್ಲ ಸ್ವರತಿಯಿಂದ ಕಂಡು ಬರುವ ದುಷ್ಪರಿಣಾಮಗಳಿಗೆ ಮಾನಸಿಕ ಭೀತಿಯೆ ಮುಖ್ಯವಾದ ಕಾರಣ ವೆಂದು ನಿಶ್ಚಿತಗೊಳಿಸಿದ್ದಾರೆ. ವಿಶೇಷತಃ ಮನಸ್ಸಿಗೆ ಸಂಬಂಧಿಸಿದ ಹುಚ್ಚು, ನಪುಂಸಕತೆ, ಕಾಮಮಾಂದ್ಯ, ಶೀಘ್ರಸ್ಖಲನ, ತೇಜೋಹೀನತೆ ಮತ್ತು ನರಮಂಡಲಕ್ಕೆ ಸಂಬಂಧಿಸಿದ ಕಂಪವಾತ, ಅರ್ಧಾಂಗವಾತಗಳು, ಮುಷ್ಟಿ ಮೈಥುನದಿಂದ ಭಯಂಕರ ನೀಗಲಾರದ ದುಷ್ಪರಿಣಾಮಗಳಾಗುತ್ತವೆಂದು ಎಲ್ಲಿಯಾದರೂ ಓದಿದ್ದರಿಂದಲೋ ಕೇಳಿದ್ದರಿಂದಲೋ ಗಾಬರಿಯಾಗಿ ಎದೆ ಯೊಡೆದುಕೊಂಡುದರ ಪರಿಣಾಮಗಳಾಗಿವೆ ಮುಷ್ಟಿಮೈಥುನದಿಂದುಂಟಾಗುವ ಭಯಂಕರ ದುಷ್ಪರಿಣಾಮಗಳ ವರ್ಣನೆಯನ್ನು ಕೇಳುವುದಕ್ಕಿಂತ ಮೊದಲಿ ತಮ್ಮ ಮೇಲೆ ಕೆಟ್ಟ ಪರಿಣಾಮವಾಗಿತ್ತೆಂದು ಯಾವ ರೋಗಿಯೂ ಬರೆದಿಲ್ಲ. ಪರಿಣಾಮದ ಎಚ್ಚರಿಕೆಯುಂಟಾದ ಕೂಡಲೆ ಮುಷ್ಟಿಮೈಥುನಕ್ಕೆ ಯಾವ

ರೀತಿಯಿಂದಲೂ ಸಂಬಂಧಿಸದ ವಿಕಾರಗಳನ್ನು ಕೂಡ ಅದರ ಪರಿಣಾಮಗಳೆಂದೆ ಎಣಿಸಿ ದಿಗಿಲುಬಿದ್ದು ಬಾಳಿನಲ್ಲಿ ನಿರಾಸೆಯನ್ನು ತುಂಬಿಕೊಂಡವರೆ ಹೆಚ್ಚು. ವಿಸರ್ಜ್ಯವಾದ ವೀರ್ಯಕ್ಕೆ ನಿರರ್ಥಕವಾದ ಮಹತ್ವವನ್ನು ಕೊಟ್ಟು ಅದನ್ನು ಕೊಡಗಟ್ಲೆ ಕಳೆದುಕೊಂಡೆನೆಂಬೂ ಜೀವನವೆ ಅದನ್ನವಲಂಬಿಸಿದುದರಿಂದ ಅದನ್ನು ಸೂರೆಗೈದು ಅಲ್ಪಾಯುಷಿಯಾದೆನೆಂದೂ ಹಗಲಿರುಳೂ ಮರುಮರುಗಿಯೆ ಹುಚ್ಚು ಹಿಡಿದ ಉದಾಹರಣೆಗಳು ಬೇಕಾದಷ್ಟಿವೆ. ಕೆಲಕೆಲವು ಹುಚ್ಚರ ಆಸ್ಪತ್ರಿಗಳಲ್ಲಿ ದಿನಕ್ಕೆ ೫೦–೬೦ ಸಲದಂತೆ ಮುಷ್ಟಿಮೈಥುನ ಮಾಡಿಕೊಂಡು ಸ್ವಲ್ಪವೂ ಆರೋಗ್ಯವನ್ನು ಕಳೆದುಕೊಳ್ಳದ ಹುಚ್ಚರಿದ್ದಾರೆಂದು ಡಾ. ಕೆಲ್ಲರನು ಅನ್ನುತ್ತಾನೆ. ಪರಿಣಾಮದ ವಿಷಯದಲ್ಲಿ ಹೆಚ್ಚುಹೆಚ್ಚಾಗಿ ಯೋಚಿಸುವ ಶಕ್ತಿಯು ಯಾರಲ್ಲಿ ವಿಶೇಷವಾಗಿದೆಯೊ ಅವರಲ್ಲಿಯೆ ಸ್ವರತಿಯ ದುಷ್ಪರಿಣಾಮಗಳೂ ಹೆಚ್ಚಾಗಿ ಕಂಡುಬರುತ್ತವೆ.

ತಾತ್ಪರ್ಯವೇನೆಂದರೆ "ಇದು ಕೆಟ್ಟುದು! ಪಾಪಕರ! ಜೀವಘಾತಕ! ಬುದ್ಧಿನಾಶಕ!" ಎಂಬ ಭೀಕರ ಪರಿಣಾಮಗಳನ್ನು ಚಿಂತಿಸುತ್ತ ಹಸ್ತಪ್ರಯೋಗವನ್ನು ಮಾಡಿಕೊಂಡರೆ ಮತ್ತು ನಂತರವೂ ಆ ದುಷ್ಪರಿಣಾಮಗಳು ತನ್ನಲ್ಲಿ ಆಗಿವೆಯೆಂದು ಹಗಲಿರುಳೂ ತನ್ನನ್ನೆ ತಾನು ಪರೀಕ್ಷಿಸುತ್ತ ಹೀಯಾಳಿಸುತ್ತ ದಿನಗಳೆಯುವವನ ಜೀವನವು ನಿರಾಶಾವೃತವಾಗುವದು. ಅವನು ಜನರಿಗಂಜುವನು. ಏಕಾಂತಪ್ರಿಯನಾಗುವನು. ದೀನ ದಾಸ್ಯವೃತ್ತಿಯುಳ್ಳವನಾಗಿ ಆತ್ಮಾಭಿಮಾನವನ್ನೂ, ಸಾಹಸವೃತ್ತಿಯನ್ನೂ ಕಳೆದುಕೊಂಡು ಜಗತ್ತಿಗೇ ಭಾರವೆನಿಸುವನು. ಅತಿ ಸ್ವರತಿಯಿಂದ ಉಂಟಾದ ಒಂದೆರಡು ದೈಹಿಕ ದುಷ್ಪರಿಣಾಮಗಳೂ ಅವನ ಕಣ್ಣಿಗೆ ಮಹಾರೋಗಗಳೆನಿಸಿ ತನ್ನ ರೋಗವು ಈ ಜನ್ಮದಲ್ಲಿ ಗುಣವಾಗುವುದು ಸಾಧ್ಯವಿಲ್ಲವೆಂದು ಸಿಟ್ಟುಸಿರಿಡುವನು. ವಸ್ತುತಃ ಆ **ಮಾನಸಿಕ ಭೀತಿಯನ್ನು ಒರೆಸಿ ಒಗೆದ ಕ್ಷಣದಿಂದ ಅವನಿಗೆ ಜೀವವು ಹಗುರಾಗುವುದಲ್ಲದೆ ಕ್ಷುಲ್ಲಕವಾದ ಬೇನೆಗಳನ್ನು ಗುಣಪಡಿಸಿಕೊಂಡು ಜೀವನ ನಾಟಕದ ಹೊಸ ಪ್ರವೇಶವನ್ನು ಆರಂಭಿಸಲು ಸ್ವರತಿಯನ್ನು ನಿಲ್ಲಿಸುವ ಮನೋಬಲವೂ ಚಿಗುರುವುದು.** ಈ ವಿಷಯದಲ್ಲಿ ಜಗತ್ಪ್ರಸಿದ್ಧ ಕಾಮವಿಜ್ಞಾನಿಗಳ ಅಭಿಪ್ರಾಯವನ್ನು ಮುಂದಿನ ಪ್ರಕರಣದಲ್ಲಿ ಓದಿರಿ.

# ಎಂಟನೆಯ ಪ್ರಕರಣ

*

## ಉಪಾಯ

ಚಿಕಿತ್ಸೆಯಲ್ಲಿಯೂ ಪಾರಂಪರಿಕ ಹಾಗೂ ಆಧುನಿಕ ಎಂದು ಎರಡು ವಿಭಾಗಗಳನ್ನು ಮಾಡಬೇಕಾಗುವದು. ಏಕೆಂದರೆ ರೋಗಕ್ಕೆ ನಾವು ಆರೋಪಿಸುವ ಕಾರಣಕ್ಕನುಸರಿಸಿ ನಮ್ಮ ಚಿಕಿತ್ಸೆಯು ಭಿನ್ನವಾಗುತ್ತದೆ ಪಾಪ ಆಧ್ಯಾತ್ಮಿಕ ಅಧೋಗತಿಗಳೆ ಸ್ವರತಿಯ ಕಾರಣವೆಂದು ಧಾರ್ಮಿಕರೆನ್ನುತ್ತಾರೆ ಆದ್ದರಿಂದ ಧಾರ್ಮಿಕರ ಹಾಗೂ ಪಾರಂಪರಿಕರ ಸ್ವರತಿಯ ಉಪಾಯಗಳು ಆಧ್ಯಾತ್ಮಿಕ ಶುದ್ಧಿಯ ಕಡೆಗೆ ಸಾಗುತ್ತವೆ ಅವುಗಳಿಂದ ದೇಹಕ್ಕೆ ಸಂಬಂಧಿಸಿದ ಕಾರಣಗಳಂತೂ ನಿವಾರಣವಾಗುವುದೆ ಇಲ್ಲ ಆಧ್ಯಾತ್ಮಿಕ ದೃಷ್ಟಿಯಿಂದ ತಾವು ಪತಿತರಾಗಿರುವೆವೆಂದು ಸ್ವರತರು ಮೊದಲೆ ತಿಳಿದಿರುವುದರಿಂದ ಅದರ ಶುದ್ಧಿಯ ಯತ್ನದಲ್ಲಿಯೂ ಅವರಿಗೆ ಎಷ್ಟು ಯಶಸ್ಸು ಸಿಗುವುದೋ ಹೇಳಲಾಗದು ಪ್ರತ್ಯಕ್ಷವೇ ಪ್ರಮಾಣವೆಂಬ ಆಧುನಿಕರ ಉಪಾಯಗಳು ರೋಗದ ಬೇರಿಗೆ ಕೊಡಲಿಯನ್ನಿಕ್ಕುತ್ತವೆ. ಅವು ಸ್ವರತಿಯಿಂದ ಆದ ಕೆಡಕನ್ನು ನಿಚ್ಚಳವಾಗಿ ಕಣ್ಣೆದುರು ತಂದಿಡುವುದರಿಂದ ಗೂಢವಾದ ಭಯಂಕರವಾದ ಸುಳ್ಳು ಕೆಡಕಿನ ಕಾಲ್ಪನಿಕ ಚಿತ್ರದಿಂದ ಸ್ವರತರು ಜರ್ಜರಿತರಾಗುವುದು ತಪ್ಪುತ್ತದೆ.

ಪಾರಂಪರಿಕರು ಸ್ವರತಿಯನ್ನು ತಿದ್ದಲು ಅನುಸರಿಸುವ ಮೊದಲನೆಯ ಉಪಾಯವೆಂದರೆ ಬೆದರಿಕೆ. ಎದೆ ನಡುಗಿಸುವ ವಿಕರಾಳ ಪರಿಣಾಮವನ್ನು ವರ್ಣಿಸುವುದು. ಭೀಕರವಾದುದೆಲ್ಲ ಯಾಕೋ ಏನೋ ಮನುಷ್ಯನಿಗೆ ಮೋಹಕವೂ ಆಗುತ್ತದೆ. ಮೊಸಳೆಗಳಿಗಂಜಿ ಮುತ್ತನ್ನಾರಿಸುವುದನ್ನೂ

ಹಾವಿಗಂಜಿ ಕೇದಿಗೆ ಹೂವನ್ನು ಸಂಗ್ರಹಿಸುವುದನ್ನೂ, ಮೇಹ ಉಪದಂಶಗಳಿ ಗಂಜಿ ವ್ಯಭಿಚಾರವನ್ನೂ, ಹೊಟ್ಟೆಶೂಲೆಗಂಜಿ ಅತ್ಯಾಹಾರವನ್ನೂ ಮನುಷ್ಯನು ಈವರೆಗೂ ತೊರೆದಿಲ್ಲ. ಹೀಗಿದ್ದು ಬರಿ ಪಾಪ-ಪಾವಿತ್ರ್ಯಗಳ ಕಾಲ್ಪನಿಕ ಸಂಯಮಕ್ಕೆ ಅವನು ಒಳಗಾಗುವುದು ಹೇಗೆ? ಕೆಲವು ಹಿರಿಯರು ಮಕ್ಕಳನ್ನು ಸ್ವರತಿಗಾಗಿ ಅತಿ ಕ್ರೂರ ರೀತಿಯಿಂದ ದಂಡಿಸುವರು. ಅದರ ಪರಿಣಾಮವಾಗಿ ಅವರು ಗುಟ್ಟಾಗಿ ಹಸ್ತಪ್ರಯೋಗಕ್ಕೆ ತೊಡಗುವರು. ಎಲ್ಲ ವಿಷಯಗಳಲ್ಲೂ ತೀರ ಕ್ರೂರವಾಗಿ ಹಿರಿಯರಿಂದ ನಡೆಸಿಕೊಳ್ಳಲ್ಪಡುವ ಹುಡುಗ-ಹುಡುಗಿಯ ರಿಗೆ ಜೀವನವು ದುಃಖಮಯವೆನಿಸಿ ಏಕಾಂತದಲ್ಲಿ ಕ್ಷಣಿಕವಾಗಿ ತಮ್ಮ ಇಂದ್ರಿಯಗಳೊಡನೆ ಆಡಿ ಸುಖಪಡುವ ಪ್ರವೃತ್ತಿಯುಂಟಾಗುತ್ತದೆ. ಆಗ ಹಿರಿಯರು ತಮ್ಮ ಮಕ್ಕಳಿಗೆ ಮಿಕ್ಕವರಂತೆ ಕೆಟ್ಟ ಚಟಗಳಿ ಇಲ್ಲವೆಂಬ ಮಿಥ್ಯಾ ಸಮಾಧಾನವನ್ನು ತಂದುಕೊಳ್ಳುತ್ತಾರೆ

ಅತಿ ವ್ಯಾಯಾಮವು ಪಾರಂಪರಿಕರು ಸ್ವರತಿಗೆ ಸೂಚಿಸುವ ಇನ್ನೊಂದು ಉಪಾಯವಾಗಿದೆ ಅತಿಯಾಗಿ ಸೇವಿಸಿದ ಅಮೃತವೂ ವಿಷವೆನಿಸದಿರದು ಇಡಿ ದೇಹವು ಪುಷ್ಟ ಪುಷ್ಟವಾಗಿ ಬೆಳೆಯಲು ಬೇಕಾದಷ್ಟು ವ್ಯಾಯಾಮ ದಿಂದ ಕಾಮೇಂದ್ರಿಯಗಳೂ ಬಲಗೊಂಡು ಸಕಾಲದಲ್ಲಿ ಕಾಮಪೀಡೆಯನ್ನುಂಟು ಮಾಡುವವು. ಮಿತಿಮೀರಿದ ವ್ಯಾಯಾಮದಿಂದ ಹೃದಯವೂ, ನರಮಂಡ ಲವೂ ದುರ್ಬಲವಾಗಿ ದಿನೇ ದಿನೇ ಶಕ್ತಿಹ್ರಾಸವಾಗುವುದು ಖಂಡಿತ. ಸಮಗ್ರ ದೇಹದಲ್ಲಿ ಶಕ್ತಿಯನ್ನು ಹೆಚ್ಚಿಸುವ ಸಾಧನೆಯನ್ನು ಮಾಡಿದ ನಂತರ ಆ ಶಕ್ತಿಯು ಕಾಮೇಂದ್ರಿಯಗಳ ಕಡೆಗೆ ಹರಿದುಹೋಗದಂತೆ ನಾವು ಮಾಡ ಲಾರೆವು ಎಂದು ಹ್ಯಾವ್‌ಲೊಕ್ ಎಲಿಸನು ಅನ್ನುತ್ತಾನೆ. ಮಿತಿಮೀರಿದ ವ್ಯಾಯಾಮದಿಂದ ಕಾಮವು ಕುಗ್ಗಬಹುದಾದರೂ ಅದರಿಂದ ಇಡಿ ದೇಹವೆ ಮುಗ್ಗುವದು ಎಂಬದನ್ನು ಮರೆಯಲಾಗದು.

ಉಪವಾಸ ಮಾಡಿದರೆ ಕಾಮವು ನಾಶವಾಗಿ ಸ್ವರತಿಯ ಒಲವು ಇಲ್ಲ ದಂತಾಗುವುದೆಂದು ಕೆಲವರ ಅಭಿಪ್ರಾಯವಿದೆ. ಕೆಲವು ತಂದೆ ತಾಯಿಗಳು ಅದನ್ನು ನಂಬಿ ಸ್ವರತರಾದ ತಮ್ಮ ಮಕ್ಕಳನ್ನು ಉಪವಾಸ ಕೆಡಹುವದೂ ಉಂಟು. ಆದರೆ ಉಪವಾಸದ ಪರಿಣಾಮವು ಹಿರಿಯರ ಇಚ್ಛೆಗೆ ತೀರ ವಿರುದ್ಧ ವಾಗಿ ಆಗುವದೆಂದು ಅವರಿಗೆ ತಿಳಿಯದು. ಉಪವಾಸದಿಂದ ಕಾಮವಿಕಾರವು ಮೊದಮೊದಲು ಹೆಚ್ಚುತ್ತಲೆ ಹೋಗುವುದೆಂದೂ ಲಿಂಗೋದ್ರೇಕವು

ಮಿತಿಮೀರಿ ಆಗಹತ್ತುವುದೆಂದೂ ಡಾ ಕೆಲ್ಲರನು ಅನ್ನುತ್ತಾನೆ ದೇಹವನ್ನು ವ್ಯರ್ಥವಾಗಿ ಸವೆಸುವಾಗ ನೈಸರ್ಗಿಕ ಸಂತಾನೋತ್ಪತ್ತಿಯ ಪ್ರೇರಣೆಯು ಹೆಚ್ಚಾಗುವುದೆ ಅದಕ್ಕೆ ಕಾರಣವಾಗಿದೆ. ದೇಹವನ್ನು ಸೊರಗಿಸುವ ಇನ್ನು ಕೆಲವು ಬೇನೆಗಳಲ್ಲಿ—ಉದಾಹರಣಾರ್ಥ-ಕ್ಷಯದಲ್ಲಿ—ಕಾಮಪೀಡೆಯು ಹೆಚ್ಚಾಗುವುದೆಂಬುದು ವೈದ್ಯರಿಗೆ ಗೊತ್ತಿದೆ. ಏಕಾದಶಿ ಮೊದಲಾದ ಕಾರಣಗಳಿಂದ ಒಂದೆರಡು ದಿನ ಪೂರ್ಣವಾದ ನಿರಾಹಾರ ಮಾಡಿದ ಅನೇಕರಿಗೆ ಈ ಅನುಭವ ಬಂದಿದೆ. ಇನ್ನು ಮಿತಿಮೀರಿ ಉಪವಾಸ ಮಾಡಿದರೆ ಕಾಮನಾಶದೊಡನೆ ಸ್ವಾಸ್ಥ್ಯನಾಶವೂ ಆಗಬಹುದು

ಕಾಮೋದಯವಾಗುವ ವಯಸ್ಸಿನಲ್ಲಿ ಮಿದುಳೂ ನರಮಂಡಲವೂ ಉಲ್ಲಾಸಪೂರಿತವಾಗಿ ಕಾಮೋತ್ತೇಜಿತವಾಗುವುದಾದ್ದರಿಂದ ಕೆಲವು ಹುಡುಗ ಹುಡಿಗಿಯರಿಗೆ ಸ್ವರತಿಯ ಪ್ರವೃತ್ತಿಯನ್ನು ತಡೆಯುವದಾಗುವುದಿಲ್ಲ. ಅಂಥವರಿಗೆ ಪಾರಂಪರಿಕ ಡಾಕ್ಟರರು 'ಬ್ರೊಮಾಯಿಡ್ಸ್' ಮೊದಲಾದ ಶಾಮಕ ಔಷಧಗಳನ್ನು ಕೊಡುವದುಂಟು ಅದರಿಂದ ಸ್ವರತಿಯ ಪ್ರವೃತ್ತಿಯು ಕೆಲವರಲ್ಲಿ ಕೊಂಚ ಮುಂದಗೊಳ್ಳುವುದೆಂಬುದು ನಿಜ. ಆದರೆ ಅದರಿಂದ ನರಮಂಡಲ ಮಿದುಳುಗಳೂ ಮಂದವಾಗಿ ಆ ಹುಡುಗ ಹುಡುಗಿಯರು ವಿದ್ಯಾಭ್ಯಾಸಕ್ಕಾಗಲಿ ಚಟುವಟಿಕೆಯ ಯಾವುದೇ ಕಾರ್ಯಕ್ಕಾಗಲಿ ನಿಷ್ಪ್ರಯೋಜಕರಾಗುತ್ತಾರೆ ಅಲ್ಲದೆ ಅಂತಹ ಔಷಧಗಳನ್ನು ಹೆಚ್ಚುದಿನ ಸೇವಿಸಿದರೆ ಅದೊಂದು ಗಾಂಜಾ, ಅಫುಗಳಂತಹ ಚಟವಾಗಿ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಕೊಡಬೇಕಾಗುತ್ತದೆ. ಅದರಿಂದ ಮುಂದೆ ನಪುಂಸಕತೆ, ಮಂದಕಾಮುಗಳಾಗುವದೂ ಉಂಟು.

ಹಸ್ತಪ್ರಯೋಗಕ್ಕಾಗಿ ಲಿಂಗ ಯೋನಿಗಳನ್ನು ಮುಟ್ಟಿಕೊಳ್ಳಬಾರದೆಂದು ಕೆಲವು ಉಪಾಯಗಳನ್ನು ಮಾಡುವ ರೂಢಿಯಿದೆ ತೀಕ್ಷ್ಣವಾದ ಕೆಲವು ದ್ರಾವಕಗಳಿಂದ ಲಿಂಗ ಯೋನಿಗಳ ಮೇಲೆ ಗುಳ್ಳೆಗಳನ್ನು ಉಂಟುಮಾಡುವುದು ಅಂತಹ ಒಂದು ಉಪಾಯವಾಗಿದೆ ಆದರೆ ಲಿಂಗ ಯೋನಿಗಳ ಸಂಚಾಲನ ಘರ್ಷಣಗಳಷ್ಟೇ ಸ್ವರತಿಯ ಮಾರ್ಗಗಳಲ್ಲ; ಇನ್ನೂ ಅನೇಕ ರೀತಿಯಲ್ಲಿ ಸ್ವೋದ್ರೇಕವನ್ನುಂಟುಮಾಡಿಕೊಂಡು ಸ್ಖಲಿಸಿಕೊಳ್ಳುವ ರೂಢಿಯುಂಟೆಂದು ವಾಚಕರಿಗೆ ಈಗಾಗಲೆ ತಿಳಿದಿದೆ. ಅಂತಹ ಸ್ವರತಿಯ ಕ್ರಮಗಳನ್ನೆಲ್ಲ ಮೇಲಿನ ಉಪಾಯವು ತೀರ ಚಿಕ್ಕ ಮಕ್ಕಳ ಮೇಲೆ ಹಿರಿಯರ

ಮಾಡುವುದು ಸಾಧ್ಯವಿದೆಯೆ ಹೊರತು ತರುಣ ತರುಣಿಯರು ತಮ್ಮ ಇಂದ್ರಿಯಗಳಿಗೆ ಅಂತಹ ರಾಕ್ಷಸೀ ಉಪಾಯಗಳನ್ನು ಮಾಡಿಕೊಳ್ಳಲಾರರು. ತೀಕ್ಷ್ಣವಾದ ದ್ರಾವಕ ಲೇಪನದಿಂದ ಇಂದ್ರಿಯದ ಸಂವೇದನೆಯು ಕುಗ್ಗಿ ಮುಂದೆ ಸಂಭೋಗ ಸುಖದಲ್ಲಿ ವ್ಯತ್ಯಯ ಬರುವ ಸಂಭವವೂ ಇದೆ.

ತರುಣರಾದ ಸ್ತ್ರೀ-ಪುರುಷರು ಪರಸ್ಪರರಿಂದ ಸಾಧ್ಯವಾದಷ್ಟು ದೂರವಾಗಿರುವುದೆ ಸ್ವರತಿಯನ್ನು ನಿಲ್ಲಿಸುವುದಕ್ಕೆ ಒಳ್ಳೆ ಸಾಧನವೆಂದು ಕೆಲವರ ಅಭಿಪ್ರಾಯವಿದೆ. ಯಾವುದನ್ನು ಬೇಡವೆಂದು ನಾವು ಕಣ್ಣು ಮುಚ್ಚುತ್ತೀವೋ ಅದೇ ಮನೋನಯನದೆದುರಿನಲ್ಲಿ ನಲಿಯುವುದೆಂದು ಮನೋವಿಜ್ಞಾನಿಗಳು ಹೇಳುತ್ತಾರೆ. ಸ್ತ್ರೀಯರ ಮಧ್ಯದಲ್ಲಿರುವಾಗಿನಕಿಂತ ಅವರಿಂದ ದೂರ ಓಡಿಹೋದಾಗಲೆ ತಮ್ಮ ಮನಸ್ಸು ಹಗಲಿರುಳೂ ಸ್ತ್ರೀ ಧ್ಯಾನದಲ್ಲಿ ತೊಡಗುವುದೆಂದು ಅನೇಕ ಸ್ವರತ ತರುಣರು ಒಪ್ಪಿಕೊಂಡಿದ್ದಾರೆ. ಅಲ್ಲದೆ ಈ ಉಪಾಯವು ಚಿರಸ್ಥಾಯಿಯಲ್ಲ. ಏಕೆಂದರೆ ಆಧುನಿಕ ಪ್ರಪಂಚದಲ್ಲಿ ಸ್ತ್ರೀಯರಿಂದ ಓಡಿ ಹೋಗಬೇಕಾದರೆ ಭೂಗರ್ಭದಲ್ಲಿ ಅಡಗಿಕೊಳ್ಳುವುದೊಂದೆ ದಾರಿ. ಈಗ ಸ್ತ್ರೀಯರು ಪ್ರವೇಶಿಸದ ಕಾರ್ಯಕ್ಷೇತ್ರವಿಲ್ಲ. ಸ್ತ್ರೀಯರಿಂದ ದೂರ ಓಡಿಹೋಗಲೆಳಸಿ ಅದು ಸಾಧ್ಯವಾಗದೆ ಸ್ತ್ರೀಯರು ಬಂದ ಕೂಡಲೆ ತಲೆಬಗ್ಗಿಸಿ ಅವರ ಮುಖವನ್ನು ನೋಡದಿರುವಂತೆ ಯತ್ನಿಸಿದರೆ ಸ್ತ್ರೀ ಚಿತ್ರಗಳ ಮೇಲೆ ವ್ಯಾಮೋಹವುಂಟಾಗುವುದೆಂದೂ, ಅದರ ಪರಿಣಾಮವಾಗಿ ಒಂದು ದೇವತೆಯ ಸುಂದರಚಿತ್ರವನ್ನು ನೋಡಿ ಸ್ವರತಿಯ ಪ್ರೇರಣೆಯಾಯಿತೆಂದೂ ಒಬ್ಬ ಸ್ವರತ ತರುಣನು ಬರೆದಿದ್ದಾನೆ. ಭೋಗ್ಯವಸ್ತುವಿನಿಂದ ದೂರ ಓಡುವುದಕ್ಕಿಂತ ಭೋಗವೃತ್ತಿಯನ್ನು ಸಂಸ್ಕರಿಸುವುದೆ ಸರಿಯಾದ ದಾರಿಯೆಂಬುದು ಶಿಕ್ಷಣಶಾಸ್ತ್ರಕ್ಕೆ ಈಗ ಮನಗಂಡಿದೆ. ಒಟ್ಟಿನಲ್ಲಿ ಪಾರಂಪರಿಕರ ಯಾವ ಉಪಾಯಗಳೂ ಸ್ವರತಿಯನ್ನು ನಿಲ್ಲಿಸುವಲ್ಲಿ ಯಶಸ್ವಿಯಾಗಲಾರವೆಂಬುದು ಸ್ಪಷ್ಟವಾದಂತಾಯಿತು.

## ಆಧುನಿಕ ಉಪಾಯ

ಚಿಕ್ಕಮಕ್ಕಳಲ್ಲಿ ಕಂಡುಬರುವ ಸ್ವರತಿಯ ಲಕ್ಷಣಗಳು ನೈಸರ್ಗಿಕವಾಗಿವೆಯೆಂದು ಆಧುನಿಕ ವಿಜ್ಞಾನವು ನಿರ್ಧರಿಸಿ ಬಿಟ್ಟಿದೆ. ಆದರೆ ಮಕ್ಕಳ

ಸ್ವರತಿಯು ಒಲವು ಬಾಹ್ಯಾಂತರಂಗಿಕ ಕೆಲವು ಉತ್ತೇಜನಗಳಿಂದ ಉಂಟಾಗುತ್ತದೆಂದು ಹಿಂದೆ ಹೇಳಿದ್ದೇವೆ. ಉದಾಹರಣಾರ್ಥ ಮಲಬದ್ಧತೆ ಬಿಗಿಯಾದ ಉಡಿಗೆಗಳು ಕರುಳಿನ ಜಂತುಗಳು ಮುಂತಾದವುಗಳಿಂದ ಜನನೇಂದ್ರಿಯದಲ್ಲಿ ಮೊದಲು ಕೆರಳಿಕೆಯುಂಟಾಗುತ್ತದೆ ಆನಂದದಾಯಕ ಬೇರೊಂದು ವಿಷಯದ ಕಡೆಗೆ ಮಕ್ಕಳ ಮನಸ್ಸು ಹರಿದ ಕೂಡಲೆ ಸ್ವರತಿಯತ್ತ ಗಮನವು ಕಡಿಮೆ ಯಾಗುವದು. ಉದ್ದೇಶಪೂರ್ವಕವಾಗಿ ಹಸ್ತಪ್ರಯೋಗವನ್ನು ಮಾಡಿಕೊಳ್ಳುವ ಸ್ವಭಾವವೂ ಮಕ್ಕಳಲ್ಲಿ ವಿಶೇಷವಾಗಿರುವುದಿಲ್ಲ. ಅಲ್ಲದೆ ಕೊನೆಯವಾಗಿ ಮಕ್ಕಳು ಬಾಲ್ಯಾವಸ್ಥೆಯಲ್ಲಿ ಸೇರಿ ಓರಿಗೆಯವರೊಡನೆ ಆಟ ಪಾಠಗಳ ಕಡೆಗೆ ಹೊರಳಿದರೆಂದರೆ ಸ್ವರತಿಯು ತನ್ನಷ್ಟಕ್ಕೆ ತಾನೇ ಬಾಡಿಹೋಗುವದು. ಇಷ್ಟೆಲ್ಲ ಕಾರಣಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೆ ಬಹುತರ ವಿಜ್ಞಾನಿಗಳೆಲ್ಲ ಮಕ್ಕಳ ಹಸ್ತಪ್ರಯೋಗದಿಂದ ಯಾವ ಅಪಾಯವೂ ಇಲ್ಲವೆಂದು ನಿರ್ಧರಿಸಿದ್ದಾರೆ. ಆದ್ದರಿಂದ ಚಿಕ್ಕಮಕ್ಕಳ ಸ್ವರತಿಗೆ ಒಳ್ಳೆ ಉಪಾಯವೆಂದರೆ ಅದನ್ನು ಅಲಕ್ಷಿಸಿಬಿಡುವುದು.

ಈ ತತ್ವವನ್ನು ಅರಿಯದ ಹಿರಿಯರು ಮಕ್ಕಳು ಜನನೇಂದ್ರಿಯಕ್ಕೆ ಕೈ ಹಚ್ಚಿ ಘರ್ಷಿಸುವುದನ್ನು ನೋಡಿ ಗಾಬರಿಯಾಗಿ "ಮುಟ್ಟಿದೆಯೆಂದರೆ ನೋಡು ಕೈಯನ್ನು ತುಂಡರಿಸುತ್ತೇನೆ" ಎಂದು ಬೆದರಿಸಿ ಜನನೇಂದ್ರಿಯಗಳ ಕಡೆಗೆ ಹೆಚ್ಚುಹೆಚ್ಚಾಗಿ ಮನಸ್ಸು ಓಡುವಂತೆ ಮಾಡುತ್ತಾರೆ ಒಂದು ವೇಳೆ ಒತ್ತಾಯದಿಂದ ಮೇಲೆ ಹೇಳಿದ ಕ್ರೂರ ಪಾರಂಪರಿಕ ಉಪಾಯಗಳಿಂದ ಮಕ್ಕಳ ಸ್ವರತಿಯ ಎಲ್ಲ ಲಕ್ಷಣಗಳನ್ನೂ ನಿರೋಧಿಸಿದರೆ ಅದರಿಂದ ಮಕ್ಕಳ ಮನಸ್ಸಿನ ಬೆಳೆಗೆಗೆ ತಡೆಯಾಗುವುದಲ್ಲದೆ, ಬೆಳೆದ ಮೇಲೆ ಆ ಮಕ್ಕಳು ವಿಕೃತ ಕಾಮಿಗಳಾಗುವರೆಂದು ಸಿಗ್ಮಂಡ್ ಫ್ರಾಯಿಡ್ ಮೊದಲಾದ ಮನೋವಿಶ್ಲೇಷಣ ಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ ಶೈಶವದಲ್ಲಿ ಕಾಮವಿರುವುದಾದ್ದರಿಂದಲೆ ಅದು ಸ್ವರತಿಯ ನೈಸರ್ಗಿಕ ಪ್ರವೃತ್ತಿಯಿಂದ ವ್ಯಕ್ತವಾಗುತ್ತದೆ ನೈಸರ್ಗಿಕ ಪ್ರವೃತ್ತಿಗೆ ತಡೆಯೊಡ್ಡಿದರೆ ಒಳಗಿನ ಕಾಮವು ಅನೈಸರ್ಗಿಕ ದಾರಿಗಳನ್ನು ಹುಡುಕುತ್ತದೆಂದು ಅವರೆನ್ನುತ್ತಾರೆ ಆದ್ದರಿಂದ ಹಿರಿಯರು ಒತ್ತಾಯದಿಂದ ಮಕ್ಕಳ ಸ್ವರತಿಯನ್ನು ತಡೆಯಬಾರದು ಆದರೆ ಹಿಂದೆ ಹೇಳಿದ ಜನನೇಂದ್ರಿಯಗಳನ್ನು ಕೆರಳಿಸುವ ಬಾಹ್ಯಾಂತರ ಕಾರಣ, ರೋಗಗಳೇನಾದರೂ ಇದ್ದರೆ

ಅವುಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡಬೇಕು. ವಯಸ್ಸಿಗೆ ತಕ್ಕಂತೆ ಸುಗುಪ್ತ ಆಟಪಾಟಗಳ ಕಡೆಗೆ ಹೊರಳಲಿಕ್ಕೆ ಪ್ರೋತ್ಸಾಹಿಸಬೇಕು ಅಪಾಯಕರವಲ್ಲದ ಮಗುವಿನ ಸ್ವಚ್ಛಂದ ಉಲ್ಲಾಸವೃತ್ತಿಗಳಿಗೆ ತಡೆಗಳನ್ನೊಡ್ಡದೆ ಹಗಲಿರುಳು ಕ್ರೂರವಾದ ನಿರ್ಬಂಧನೆಗಳಲ್ಲಿರಿಸದೆ ಒಳ್ಳೆಯ ಗೆಳೆಯ ಗೆಳತಿಯರನ್ನು ದೊರಕಿಸಿಕೊಡಬೇಕು. ಈ ಉಪಾಯಗಳಿಂದ ಮಗುವು ಬಾಲ್ಯಾವಸ್ಥೆಯಲ್ಲಿ ಸೇರುವ ಮೊದಲೆ ಸ್ವರತಿಯನ್ನು ಮರೆತುಬಿಡುತ್ತದೆ ಇಷ್ಟೆಲ್ಲ ಉಪಾಯಗಳನ್ನು ಮಾಡಿಯೂ ಮಗುವು ಸಕಾಲದಲ್ಲಿ ಹೊರಜಗತ್ತಿನ ಕಡೆಗೆ ಮನಸ್ಸು ಕೊಡದೆ ಆಟಪಾಟಗಳಲ್ಲಿ ಲೀನವಾಗದೆ ಸ್ವರತಿಯನ್ನು ಬಾಲ್ಯಾವಸ್ಥೆಯಲ್ಲಿಯೂ ಹೆಚ್ಚು ಹೆಚ್ಚಾಗಿ ಮಾಡಿಕೊಳ್ಳಹತ್ತಿದರೆ ಸದ್ವೈದ್ಯರಿಗೆ ಆ ಮಗುವನ್ನು ತೋರಿಸಿ ಅದರ ದೇಹ ಮನಸ್ಸುಗಳಲ್ಲಿರುವ ದೋಷಗಳನ್ನು ಕಂಡು ಚಿಕಿತ್ಸಬೇಕೇ ಹೊರತು ದಂಡನೋಪಾಯವು ಖಂಡಿತವಾಗಿ ಉಪಯುಕ್ತವಾಗುವುದಿಲ್ಲ

ದೊಡ್ಡವರ ಸ್ವರತಿಯ ಉಪಾಯಗಳಲ್ಲಿ ಮುಖ್ಯವಾಗಿ ಎರಡು ವಿಭಾಗಗಳನ್ನು ಮಾಡಬಹುದು ಒಂದು ಸ್ವರತಿಯಿಂದಾಗುವ ಅಪಾಯದ ನಿವಾರಣೆ. ಇನ್ನೊಂದು ಸ್ವರತಿಯನ್ನು ನಿಲ್ಲಿಸುವ ಉಪಾಯ. ಸ್ವರತಿಯಿಂದಾಗುವ ಅಥವಾ ಆದ ಅಪಾಯದ ನಿವಾರಣೆಗೆ ತೀರ ಮಹತ್ವದ ಮೊದಲನೆಯ ಉಪಾಯವೆಂದರೆ ಸ್ವರತರ ಮನೋಧೈರ್ಯವನ್ನು ಬೆಳೆಸುವದು. ಹಾಗೆ ಧೈರ್ಯವನ್ನು ಹೆಚ್ಚಿಸಲು ಸ್ವರತರಿಗೆ ಸುಳ್ಳು ತತ್ವಗಳನ್ನು ಹೇಳುವ ಅಗತ್ಯವಿಲ್ಲ. ಏಕೆಂದರೆ ಲಕ್ಷಾವಧಿ ಸ್ವರತರನ್ನು ಪರಿಶೀಲಿಸಿದ ಅನೇಕ ವಿಜ್ಞಾನಿಗಳು ಇಂದು ಉಚ್ಚ ಸ್ವರದಿಂದ "ಹಸ್ತಪ್ರಯೋಗದಿಂದ ಹುಚ್ಚು, ಅಪಸ್ಮಾರ, ಭೂತೋನ್ಮಾದ, ಅರ್ಧಾಂಗವಾತ, ಕ್ಷಯ, ನಪುಂಸಕತೆ ಮುಂತಾದ ಯಾವ ಭಯಂಕರ ರೋಗಗಳೂ ಉಂಟಾಗುವುದಿಲ್ಲ" ಎಂದು ಖಂಡತುಂಡವಾಗಿ ಹೇಳುತ್ತಿದ್ದಾರೆ. ಉದಾಹರಣೆಗಾಗಿ ಕೆಲವು ಸುಪ್ರಸಿದ್ಧ ವಿಜ್ಞಾನಿಗಳ ಅಧಿಕಾರವಾಣಿಗಳನ್ನು ಇಲ್ಲಿ ಉದಾಹರಿಸಿದ್ದೇವೆ:—

ಸ್ವರತಿಯಿಂದ ತರುಣ ತರುಣಿಯರು ಹುಚ್ಚರಾಗುವರೆಂಬ ಮಾತಿನಲ್ಲಿ ಎಳ್ಳಷ್ಟೂ ತಥ್ಯಾಂಶವಿಲ್ಲ. —ಕ್ರಾಫ್ಟ್ ಎಬ್ಬಿಂಗ್

ಮಿತವಾದ ಸ್ವರತಿಯಿಂದ ಭಯಂಕರವಾದ ಯಾವ ಕೆಟ್ಟ ಪರಿಣಾಮಗಳೂ ಆಗುವದಿಲ್ಲವೆಂದು ಸಿದ್ಧಾಂತವಾಗಿ ಹೇಳಬಹುದು ಅತಿ ಸ್ವರತಿಯಿಂದ

ಕೂಡ ಚರ್ಮ, ಪಾಚಕಾಂಗ, ರಕ್ತಪರಿಚಲನಗಳ ಬೇನೆಯೂ ತಲೆಶೂಲೆ, ಮೈಕೈನೋವು ಮತ್ತು ಅಶಕ್ತಿಗಳೂ ಸ್ವಲ್ಪ ಉಂಟಾಗಬಹುದು.

**—ಪ್ರೊ ಹಾವ್‌ಲೋಕ್ ಎಲಿಸ್.**

ಇಪ್ಪತ್ತು ವರ್ಷಗಳ ನನ್ನ ಆಸ್ಪತ್ರೆಗಳ ಅನುಭವದಿಂದಲೂ ಸ್ವತಂತ್ರವಾದ ನನ್ನ ವೈದ್ಯಕೀಯ ಅನುಭವದಿಂದಲೂ ಸ್ವರತಿಯಿಂದ ಬೆರಳೆಣಿಸಿ ಹೇಳುವಂತಹ ದುಷ್ಪರಿಣಾಮವೇನೂ ಆಗುವದಿಲ್ಲನೆಂದು ಹೇಳಬಹುದು

**—ಡಾ. ಕ್ರಿಶ್ಚಿಯನ್**

ಸ್ವರತಿಯಿಂದ ಮುಂದೆ ವೈವಾಹಿಕ ಸುಖಕ್ಕೆ ಯಾವುದೇ ರೀತಿಯಿಂದ ತಡೆಯುಂಟಾಗಲಾರದು **—ಡಾ. ಕ್ಯಾಥೆರಿನ್ ಡೇವಿ.**

ಸತ್ಯ ಸಂಗತಿಯೆಂದರೆ ನೂರಕ್ಕೆ ೯೦ ಮಂದಿ ಸ್ವರತಿನ್ನಾಚರಿಸುತ್ತಾರೆ ಅವರಲ್ಲಿ ಶಾಶ್ವತವಾದ ಯಾವುದೆ ಕೆಟ್ಟ ಪರಿಣಾಮವಾಗುವುದು ಅಪರೂಪ ಆದ ಒಂದೆರಡು ಕೆಡುಕುಗಳು ಕೂಡ ಸ್ವರತಿಯ ಪರಿಣಾಮಗಳಲ್ಲ ಅವರೆ ಸ್ವರತರ ಮನೋಭೀತಿಯ ಪರಿಣಾಮಗಳಾಗಿವೆ

**—ಡಾ. ನಾರ್ಮನ್ ಹೇರ್.**

ಮಿತವಾದ ಸ್ವರತಿಯಿಂದ ಯಾವ ಕೆಡುಕೂ ಉಂಟಾಗುವದಿಲ್ಲನೆಂಬುದು ನನ್ನ ಸಿದ್ಧಾಂತವಾಗಿದೆ ಜನರು ಆಡಿಕೊಳ್ಳುತ್ತಿರುವಷ್ಟು ಭಯಂಕರ ದುಷ್ಪರಿಣಾಮಗಳು ಅದರಿಂದ ಆಗುತ್ತಿದ್ದರೆ ಈ ಜಗತ್ತಿನಿಂದ ಮಾನವ ಜಾತಿಯು ಎಂದೋ ನಷ್ಟವಾಗಿ ಹೋಗಬೇಕಿತ್ತು ಏಕೆಂದರೆ ಸ್ವರತಿಯನ್ನು ಮಾಡಿಕೊಳ್ಳದ ಸ್ತ್ರೀಪುರುಷರೇ ಇಲ್ಲ **—ಡಾ. ವಿಲ್‌ಹೆಲ್ಮ ಸ್ಟೀಕೆಲ್.**

ಅತಿಯಾಗಿ ಮಿತಿಮೀರಿ ಸ್ವರತಿಯನ್ನಾಚರಿಸಿಯೂ ನಪುಂಸಕತೆಯಾಗಲಿ ಬೇರೆ ದುಷ್ಪರಿಣಾಮವಾಗಲಿ ಕೊಂಚವೂ ಆಗದಂತಹ ಸಾವಿರಾರು ವ್ಯಕ್ತಿಗಳನ್ನು ನಾನು ಬಲ್ಲೆ ಮುಷ್ಟಿಮೈಥುನದ ಗೋಜಿಗೇ ಹೋಗದಿದ್ದರೂ ನಪುಂಸಕರಾಗಿರುವವರ ಉದಾಹರಣೆಗಳೂ ನನಗೆ ಗೊತ್ತಿವೆ ಒಟ್ಟಿನಲ್ಲಿ ಈ ವಿಷಯಕ್ಕೆ ಸರಾಸರಿ ಸಿದ್ಧಾಂತಗಳನ್ನು ಕಟ್ಟುವುದು ಮೂರ್ಖತನ.

**—ಡಾ ರಾಬಿನ್‌ಸನ್.**

**ಡಾ ರೋಬಿ** ಎಂಬ ಅಮೇರಿಕೆಯ ಪ್ರಸಿದ್ಧ ಅನುಭವಿಯಾದ ಡಾಕ್ಟರನು ತನ್ನ "ರ್‍ಯಾಶನಲ್ ಸೆಕ್ಸ ಎಥಿಕ್ಸ" ಎಂಬ ಪುಸ್ತಕದಲ್ಲಿ ಮುಷ್ಟಿ

ಮೈಥುನವು ವಿಶಿಷ್ಟರೋಗಗಳ ನಿವಾರಣೆಗಾಗಿ ಉಪಯುಕ್ತವೆಂದೂ ಃ
ವಾಗಿ ಹೆಂಗಸರ ನರಮಂಡಲದ ವ್ಯಾಧಿಗಳಿಗೆ ಹಸ್ತಪ್ರಯೋಗವು ಔಷಧಃ
ಅದು ನೈಸರ್ಗಿಕ ಸಂಭೋಗದಷ್ಟೆ ಒಳ್ಳೆಯದೆಂದೂ ಹೇಳುತ್ತಾನೆ

ಸ್ವರತಿಯು ಎಂದೂ ಕೆಡಕನ್ನುಂಟುಮಾಡುವುದಿಲ್ಲ ಮುಂದೆ ಪ್ರೇಮ
ವಾಗಿ ಬೆಳೆಯಬೇಕಾದುದರ ಬೀಜವೇ ಬಾಲ್ಯದ ಸ್ವರತಿಯಾಗಿದೆ. ಃ
ಮೈಥುನವು ದಾಂಪತ್ಯಪ್ರೇಮಕ್ಕೆ ತರುಣತರುಣಿಯರನ್ನು ಕರೆದೊಂ
ನೈಸರ್ಗಿಕ ಮಾರ್ಗವಾಗಿದೆ —**ಶಿಲ್ವಿಯಾ ಪೆಂಟಿ**

ಮೇಲೆ ಉದಾಹರಿಸಲ್ಪಟ್ಟ ಡಾ. ನಾರ್ಮನ್ ಹೇರನು ಇನ್ನೂ
ಹೆಜ್ಜೆ ಮುಂದೆ ಇಟ್ಟು ಹೇಳುತ್ತಾನೆ " ಸ್ವರತಿಯಿಂದ ನಿನಗೇನೂ ಕೆಡು
ವುದಿಲ್ಲ ನಿನಗೆ ಎಷ್ಟು ಸಲ ಬೇಕು ಅಷ್ಟು ಸಲ ಹಸ್ತಪ್ರಯೋಗ
ಮಾಡಿಕೊ ಎಂದು ಧೈರ್ಯವಾಗಿ ಉಪದೇಶಿಸುವುದು ಸ್ವರತಿಯನ್ನು ನಿಲ್ಲಿ
ಉತ್ತಮವಾದ ಉಪಾಯವೆಂದು ನಾನು ಮನಗಂಡಿದ್ದೇನೆ ಸ್ವರತನ
ಉಪದೇಶವನ್ನು ಕೇಳಿ ಹೋಗುತ್ತಾನೆ ಮುಂದೆ ಆಗಾಗ್ಗೆ ಅವನನ್ನು ಕಂ
ಅವನು ಮುಷ್ಟಿಮೈಥುನದ ಸರತಿಗಳನ್ನು ಕಡಿಮೆ ಮಾಡಿಕೊಂಡು
ಹೇಳುತ್ತಾನೆ. ಅದರಿಂದಾಗುವ ಸುಳ್ಳು ದುಷ್ಪರಿಣಾಮಗಳ ಅಂಜಿ
ಹೋದನಂತರ ಅವನಿಗೆ ಮುಷ್ಟಿಮೈಥುನದಲ್ಲಿ ಆಕರ್ಷಣವೂ ಕಡಿಮೆಯ
ತ್ತದೆ. ಅವನು ವೃಥಾ ಆ ಮನೋಭೀತಿಯ ರಕ್ಕಸರೊಡನೆ ಹೋರಾ
ತನ್ನನ್ನು ತಾನು ಶಪಿಸಿಕೊಳ್ಳುತ್ತ ಸೊರಗೈಯುತ್ತಿರುವ ಶಕ್ತಿಯು ಸಂ
ವಾಗಿ ಈಗ ಸ್ವರತಿಯನ್ನು ನಿಲ್ಲಿಸುವ ಮನೋಬಲವನ್ನು ಹೆಚ್ಚಿಸುತ್ತದೆ.

ವಿವಿಧ ವಿಶಾಲ ಅನುಭವಿಗಳಾದ ವಿಜ್ಞಾನಿಗಳ ಅಭಿಪ್ರಾಯ
ಮೇಲೆ ಉದಾಹರಿಸಿದುದು ' ಸ್ವರತಿಗೆ ವಿಜಯವಾಗಲಿ ' ಎಂದು ಸಾರಥ್ಯ
ವಹಿಸಲಿಕ್ಕಲ್ಲ ಆದರೆ ಸ್ವರತರು ಆ ಹಿರಿಯರ ಮಾತುಗಳನ್ನು ಓದಿ ಕ್ಷ
ಕುಷ್ಠ, ಷಂಢತ್ವಗಳ ಭಯಭೂತಗಳನ್ನು ಉಚ್ಚಾಟನೆ ಮಾಡಲು ಸಮ
ರಾಗಲೆಂದು. ಎಲ್ಲ ವಿಧದ ಅವನತಿಗೂ ಆತ್ಮವಿಶ್ವಾಸವೆ ಮದ್ದು. ರೊ
ತಾನು ಗುಣವಾಗುತ್ತೇನೆಂಬ ಭರವಸೆಯುಂಟಾದರೆ ರೋಗದ ಯಾ
ಗಳೆಷ್ಟೋ ಕಡಿಮೆಯಾಗುವವು ಸ್ವರತಿಯಿಂದ ಘೋರವಾದ ವ್ಯಾಧಿಗಳಾ
ಯಾವ ವಿಜ್ಞಾನಿಗೂ ಕಂಡುಬಂದಿಲ್ಲ. ಜಗತ್ತಿನ ಬಹುತರ ಸ್ತ್ರೀಪುರು

ಹಸ್ತಪ್ರಯೋಗವನ್ನು ಮಾಡಿಕೊಂಡಿದ್ದರೂ ಆ ಘೋರ ವ್ಯಾಧಿಗಳಿಂದ ನರಳು ವವರ ಸಂಖ್ಯೆ ಬಹುತರವಾಗಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಇದೊಂದೆ ನಿದರ್ಶನವನ್ನು ಕಣ್ಣುಮುಂದಿಟ್ಟುಕೊಂಡು ಸ್ವರತರು ತಮ್ಮ ಅನುರತ್ವಭಾವ ವನ್ನು ಕಳೆದುಕೊಳ್ಳಬೇಕು

ಇನ್ನು ಅತಿ ಸ್ವರತಿಯಿಂದಾಗುವ ಕೆಡಕುಗಳನ್ನು ಹಿಂದಿನ ಅಧ್ಯಾಯ ದಲ್ಲಿ ವಿವರಿಸಿದ್ದೇವೆ. ಆ ಕೆಡಕುಗಳು ಕೆಲವರಲ್ಲಿ ಮಸುಕಾಗಿ ತೋರಬಹುದು. ಕೆಲವರಲ್ಲಿ ತುಸು ಪ್ರಖರವಾಗಿ ತೋರಬಹುದು ಆದರೆ ಅವಾವೂ ಕೈಮೀರಿದ ಚಿಕಿತ್ಸೆಗೆ ನಿಲುಕದ ಅಕ್ರಮಗಳಲ್ಲ ಸ್ವರತಿಯನ್ನು ನಿಲ್ಲಿಸಿದ ಕ್ಷಣದಿಂದಲೆ ಆ ಕೆಡಕುಗಳು ಅದೃಶ್ಯವಾಗುವವು. ಅತಿಮುಷ್ಟಿಮೈಥುನದಿಂದ ಜನನೇಂದ್ರಿಯ ಗಳಲ್ಲಿ ಕೊಂಚ ಅಶಕ್ತಿ ತೋರಿಬಂದರೂ ಮುಷ್ಟಿಮೈಥುನವನ್ನು ಪೂರ್ಣವಾಗಿ ನಿಲ್ಲಿಸಿದ ನಿಮಿಷದಿಂದಲೆ ಆ ಇಂದ್ರಿಯಗಳಲ್ಲಿ ಕಸುವು ತುಂಬುವುದು. ಒಟ್ಟಿನಲ್ಲಿ ತುಂಬಿಬರಲಾರದಂತಹ ಕೊರತೆಯೇನೂ ಸ್ವರತಿಯಿಂದ ಉಂಟಾಗುವುದಿಲ್ಲ ವೆಂದು ಸತ್ಯವಾಗಿ, ಸಿದ್ಧಾಂತವಾಗಿ, ನಿಶ್ಚಿತವಾಗಿ ಹೇಳಬಹುದು

ಮನೋಧೈರ್ಯವನ್ನು ಬೆಳೆಸುವ ಉತ್ಕೃಷ್ಟವಾದ ಸಾಧನವೆಂದರೆ ಕಾಮಾಂಗಗಳ ರಚನೆ ಕ್ರಿಯೆಗಳ ಬಗ್ಗೆ ಶಾಸ್ತ್ರೀಯವಾದ ಅಭ್ಯಾಸ ಕಾಮ ವಿಜ್ಞಾನವನ್ನು ಅರಿತ ಬಾಲಬಾಲಿಕೆಯರು ಸ್ವರತಿಯ ಚಟಕ್ಕೆ ಬೀಳುವ ಸಂಭವವೂ ಕಡಿಮೆ. ಏಕೆಂದರೆ ಕಾಮಾಂಗಗಳು ನಮ್ಮ ಜೀವನದ ಸುಖ ದುಃಖಗಳ ಸೂತ್ರಧಾರಿಗಳಾದ ಓಜೋಗ್ರಂಥಿಗಳಿಗೆ ನಿಕಟವಾಗಿ ಸಂಬಂಧಿ ಸಿರುವುದರಿಂದ ಅವುಗಳನ್ನು ದುರುಪಯೋಗಪಡಿಸದೆ ನಿರ್ಮಲವಾಗಿಟ್ಟು ಕೊಂಡರೆ ಮುಂದಿನ ದೈಹಿಕ, ಬೌದ್ಧಿಕ ಅಭ್ಯುದಯಕ್ಕೆ ಅವು ಸಹಾಯಕ ವಾಗುವುವೆಂಬುದನ್ನು ಅವರು ಕಾಮವಿಜ್ಞಾನದಿಂದ ತಿಳಿದಿರುತ್ತಾರೆ. ಇಷ್ಟಾ ಗಿಯೂ ವಿಕಾರಬಲದಿಂದ ಅವರು ಸ್ವರತಿಯನ್ನು ಆಚರಿಸಿದರೆ ಅದರಲ್ಲಿ ಮಿತಿ ಯನ್ನಿಟ್ಟುಕೊಳ್ಳುವರು. ಮತ್ತು ಒಮ್ಮೆ ಮಾಡಿಕೊಂಡ ಬಗ್ಗೆ ಬಯಂಕರ ವಾದ ಅಶಾಸ್ತ್ರೀಯ ಪರಿಣಾಮಗಳಿಗಂಜಿ ಜೀವನವನ್ನು ಹಾಳು ಗೈಯದೆ ತಮ್ಮ ದೌರ್ಬಲ್ಯಕ್ಕಾಗಿ ನಕ್ಕು ತನುಮನಗಳನ್ನು ತಮ್ಮ ಆಧೀನದಲ್ಲಿಟ್ಟು ಕೊಳ್ಳಲು ಪುನಃ ಪುನಃ ಹೆಣಗುವರು ಕಾಮವಿಜ್ಞಾನವನ್ನು ಅರಿತ ಯುವಕ ಯುವತಿಯರು ಸ್ವರತಿಯ ಪರಿಣಾಮಗಳನ್ನೂ ಅರಿತಿರುವುದರಿಂದ ಕುವೈದ್ಯರ

ಜಾಹೀರಾತುಗಳನ್ನು ಓದಿ ಅವರ ಬೊಕ್ಕಸವನ್ನು ತುಂಬಲಾರರು ಡಾ. ಡಿಕಿನ್‌ಸನ್, ಡಾ. ಕೆಲ್ಲರ್ ಮುಂತಾದ ಕಾಮಾಂಗಗಳ ತಜ್ಞರು "ನೈಸರ್ಗಿಕ ವಾಗಿ ಕೆಲವರ ಲಿಂಗಗಳು ತುಸು ಡೊಂಕಾಗಿರುವವು, ಲಿಂಗದ ಮೇಲಿನ ನರಗಳು ಉಬ್ಬಿಕೊಂಡಿರುವವು; ಲಿಂಗದ ಮಣಿಯ ಮೇಲೆ ಕಪ್ಪು ಕಲೆಗಳಿರು ವವು; ಆದರೆ ಅಜ್ಞಾನಿಗಳಾದ ತರುಣರು ಅವು ಮುಷ್ಟಿಮೈಥುನದ ಪರಿಣಾಮ ವೆಂದು ಗಾಬರಿಗೊಳ್ಳುವರು" ಎಂದು ಬರೆದಿದ್ದಾರೆ ಉದ್ರೇಕವಿಲ್ಲದಿರು ವಾಗ ಲಿಂಗವು ೨ ಇಂಚಿಗಿಂತ ಚಿಕ್ಕದಾಗಿರುವುದು ಎಂದು ಅಂಜಿಕೊಳ್ಳುವವರೂ ಅನೇಕರಿದ್ದಾರೆ. ಆದರೆ ಉದ್ರಿಕ್ತವಾದಾಗ ಅವರ ಇಂದ್ರಿಯವು ೫-೬ ಇಂಚು ಗಳವರೆಗಿರುವುದೆಂದು ಒಪ್ಪುತ್ತಾರೆ ವಸ್ತುತಃ ಲಿಂಗದ ಆರೋಗ್ಯವನ್ನು ಗಮನಿಸುವಾಗ ಅನುದ್ರಿಕ್ತಾವಸ್ಥೆಯಲ್ಲಿ ಅದರ ಉದ್ದಳತೆಯು ಅಷ್ಟು ಮುಖ್ಯ ವಾದುದಲ್ಲ. ಉದ್ರೇಕಗೊಂಡಾಗ ಅದು ಕನಿಷ್ಠ ನಾಲ್ಕು ಇಂಚಿನಷ್ಟು ಉದ್ದ ವಿದ್ದರೂ ಮುಂದಿನ ಸಾಂಸಾರಿಕ ಜೀವನಕ್ಕೆ ಯಾವ ತಡೆಯೂ ಉಂಟಾಗ ಲಾರದು. ಅತಿಯಾಗಿ ಕಾಮವಿಕಾರವನ್ನು ಕೆರಳಿಸಿಕೊಳ್ಳುವವರಿಗೆ ಸ್ತ್ರೀ-ದರ್ಶನವು ಮಾತ್ರದಿಂದಲೇ ಪ್ರಸ್ಥಿತಗ್ರಂಥಿಯ ರಸವು ಒಸರಿ ಹೊರಗೆ ಬರು ವುದು. ಅದು ವಿಕಾರವಾದಾಗ ನೈಸರ್ಗಿಕವಾಗಿ ಹೊರಗೆ ಬರುವ ರಸವಾಗಿದೆ ಅತಿ ವಿಕಾರದಿಂದ ತುಸು ಹೆಚ್ಚು ಬರಬಹುದು. ಅದು ವೀರ್ಯವಲ್ಲ. ಇದನ್ನು ತಿಳಿಯದೆ ಬಹುತರ ಯುವಕರು ಸ್ತ್ರೀದರ್ಶನದಿಂದಲೆ ತಮಗೆ ಸ್ಖಲನವಾಗು ವುದೆಂದೂ ಹೀಗಾದರೆ ತಾವು ನಪುಂಸಕರಾಗುವುದು ಖಂಡಿತವೆಂದೂ ಬೆದರಿ ಬಿಡುತ್ತಾರೆ. ಪ್ರಸ್ಥಿತಗ್ರಂಥಿಯ ರಸವು ತಿಳಿಯಾಗಿ ಇರುವುದರಿಂದ ಅದನ್ನು ನೋಡಿ ತಮ್ಮ ವೀರ್ಯವು ನೀರಾಗಿರುವುದೆಂದು ಕೆಲವರು ಅಂಜು ತ್ತಾರೆ. ಕಾಮಾಂಗಗಳ ಸರಿಯಾದ ಅರಿವಿದ್ದವರು ಇಂತಹ ತಪ್ಪು ತಿಳು ವಳಿಕೆಯನ್ನು ಮಾಡಿಕೊಳ್ಳಲಾರರು. ಮತ್ತು ಇಂತಹ ಹುಚ್ಚು ಕಲ್ಪನೆಗಳ ಮೇಲೆ ತಮ್ಮ ಹೊಟ್ಟೆಹೊರಕೊಳ್ಳುವ ಡಾಕ್ಟರ-ವೈದ್ಯ-ಹಕೀಮರೂ ಕೊಂಚ ತಮ್ಮ ನಾಲಿಗೆಯನ್ನು ಅಂಕೆಯಲ್ಲಿಟ್ಟುಕೊಳ್ಳಬೇಕಾಗುವದು

ವಿವಾಹಿತರಾದ ನಂತರವೂ ಸ್ವರತಿಯನ್ನು ಬಿಡಲಾರದವರಿಗೂ ಕಾಮವಿಜ್ಞಾ ನವು ಒಳ್ಳೇ ಉಕಾರವನ್ನು ಮಾಡುವದು. ಸಂಭೋಗದಲ್ಲಿ ತೃಪ್ತಿಯಾಗದ್ದ ರಿಂದಲೆ ವಿವಾಹಿತ ಸ್ತ್ರೀ-ಪುರುಷರು ಸ್ವರತಿಯನ್ನು ಬಿಡಲಾರದವರಾಗಿರು

ತ್ತಾರೆ. ಅಂಥವರು ನಮ್ಮ 'ಪ್ರೇಮಕಲೆ' ಯಂತಹ ಪುಸ್ತಕಗಳನ್ನು ಓದಿ ತೃಪ್ತಿಯ ಹಂಚಿಕೆಯನ್ನು ಕಂಡುಕೊಂಡರೆ ಸ್ವರತಿಯು ತನ್ನಷ್ಟಕ್ಕೆ ಕಡಿಮೆ ಯಾಗುವದು ಒಟ್ಟಿನಲ್ಲಿ ಕಾಮವಿಜ್ಞಾನದ ಅಭ್ಯಾಸದಿಂದ ಕಾಮಾಂಗಗಳ ವಿಷಯಕ್ಕೆ ಗುಟ್ಟಿನ ಗುಹೆಯಲ್ಲಿ ಬಚ್ಚಿಡಲ್ಪಟ್ಟ ಸಂಗತಿಗಳೆಲ್ಲ ತಿಳಿದು ಮನೋ ಧೈರ್ಯವು ಹೆಚ್ಚಿ ಸ್ವರತಿಯೊಂದು ಹುಡುಗತನದ ಚೇಷ್ಟೆ, ದೊಡ್ಡವರಿಗೆ ಅದು ಒಪ್ಪುವದಿಲ್ಲ; ಎಂದು ಸಹಜವಾಗಿ ಅದನ್ನು ಬಿಡುವ ಪ್ರವೃತ್ತಿ ಯಾಗುವದು

ಡಾ. ವಿಲ್‌ಹೆಲ್ಮ್ ಸ್ಟೀಕೆಲ್ಲನು ಚಿಕ್ಕಂದಿನಲ್ಲಿ ಅತಿಯಾಗಿ ಸ್ವರತಿ ಯನ್ನು ಮಾಡಿಕೊಳ್ಳುತ್ತಿದ್ದನು ಅವನು ಬಹು ಕುಶಾಗ್ರಬುದ್ಧಿಯವನೂ, ಕವಿಯೂ, ವಿಜ್ಞಾನ ಸಂಶೋಧನಗಳ ಪ್ರವೃತ್ತಿಯುಳ್ಳವನೂ ಆಗಿದ್ದನು ಯಾವುದೋ ಒಂದು ಪುಸ್ತಕದಲ್ಲಿ ಸ್ವರತಿಯಿಂದ ಆಗುವ ಭಯಂಕರ ಪರಿ ಣಾಮಗಳನ್ನು ಓದಿ ಅವನಿಗೆ ಜೀವನದಲ್ಲಿ ನಿರಾಶೆಯೆನಿಸಿತು, ತನ್ನ ಬೌದ್ಧಿಕ ಭವಿತವ್ಯವು ಒಮ್ಮೆಲೆ ಕುಪ್ಪಳಿಸಿತೆಂದು ಅವನು ಅಂಜಿದನು. ಆದರೆ ಆ ಭೀತಿಯಿಂದ ಸ್ವರತಿಯ ವಿಷಯಕ್ಕೆ ಅವನ ಮೋಹವು ಹೆಚ್ಚುತ್ತ ಹೋಯಿತು, ಹೀಗೆಯೆ ನಿಟ್ಟುಸಿರಿಡುತ್ತ ಭೀತಿಯ ಜೀವನವನ್ನು ಎಳೆಯುತ್ತ ನಡೆದಿದ್ದನು ಒಂದು ದಿನ ಅವನು ಓದುತ್ತಿರುವ ಕಾಲೇಜಿನ ಒಬ್ಬ ಪ್ರಸಿದ್ಧ ಪ್ರೊಫೆಸರನು "ವಾರದಲ್ಲಿ ಒಂದೆರಡು ಸಲ ಸ್ಖಲಿಸಿಕೊಳ್ಳುವದರಿಂದ ತರುಣ ರಿಗೆ ಯಾವ ಅಪಾಯವೂ ಇಲ್ಲ" ಎಂದು ಹೇಳಿದುದನ್ನು ಕೇಳಿದ ಕ್ಷಣದಿಂದ ಸ್ಟೀಕೆಲ್ಲನಿಗೆ ನವಜೀವನದ ಉದಯವಾಯಿತು ಅಂದಿನಿಂದಲೆ ಅವನಿಗೆ ಸ್ವರತಿಯ ಮೋಹವೂ ಕಡಿಮೆಯಾಗುತ್ತ ಬಂತು ಮುಂದೆ ಅವನು ವಿಯೆನ್ನದ ಜಗತ್ಪ್ರಸಿದ್ಧ ಮನೋವಿಶ್ಲೇಷಣ ಶಾಸ್ತ್ರಜ್ಞನೆನಿಸಿದನು.

ಮನೋಧೈರ್ಯ, ಕಾಮಶಾಸ್ತ್ರದ ಜ್ಞಾನಗಳ ಹೊರತಾಗಿ ಮುಷ್ಟಿ ಮೈಥುನವನ್ನು ತಡೆಗಟ್ಟುವ ಇನ್ನೊಂದು ಉತ್ತಮವಾದ ಉಪಾಯವೆಂದರೆ ತಾರುಣ್ಯಕ್ಕೇರಿದ ಹುಡುಗ ಹುಡುಗಿಯರಿಗೆ ಸಕಾಲದಲ್ಲಿ ಮದುವೆ ಮಾಡಿ ಕೊಳ್ಳಲಿಕ್ಕೆ ಅನುವು ಮಾಡಿಕೊಡುವುದು. ಅದರಿಂದ ನೈಸರ್ಗಿಕವಾದ ಸಂಭೋಗಕ್ಕೆ ಎಡೆಸಿಗುವುದರಿಂದ ಅನೈಸರ್ಗಿಕ ತೃಪ್ತಿಯ ದಾರಿಗಳನ್ನು ಅವರು ಹುಡುಕುವ ಅಗತ್ಯ ಬೀಳುವುದಿಲ್ಲ. "ಜಗತ್ತಿನಲ್ಲಿ ನಾಗರಿಕತೆಯು

ಬೆಳೆದಂತೆ ಅಸ್ವೈಸರ್ಗಿಕ ನೀತಿ ಬಂಧನಗಳೂ ಬೆಳೆಯುತ್ತವೆ ಅದರಿಂದ ತೃಪ್ತಿಯ ನೈಸರ್ಗಿಕ ಮಾರ್ಗಕ್ಕೆ ತಡೆಯುಂಟಾಗುತ್ತದೆ ಆದ್ದರಿ ಅನಾಗರಿಕರಿಗಿಂತ ನಾಗರಿಕರಲ್ಲಿಯೆ ಮಿತಿಮೀರಿದ ಹಸ್ತಪ್ರಯೋಗವು ಹ ವಾದುದು ಕಂಡುಬರುತ್ತದೆ" ಎಂದು ಪ್ರೊ. ಮಾಂಟೆಗಾಝಾನು ಹೇಳಿ "ಶರೀರಗಳು ನಗ್ನವಾಗಿರುವ ಜನಾಂಗಗಳಲ್ಲಿ ತರುಣ ತರುಣಿ ಮುಷ್ಟಿಮೈಥುನವು ಎಳ್ಳಷ್ಟೂ ಕಂಡುಬರುವುದಿಲ್ಲ" ಎಂದು ಅವನೇ ದ್ದಾನೆ ಕೆಲಕೆಲವು ಕಾಡು ಜನಾಂಗಗಳಲ್ಲಿ ಬಾಲಬಾಲಿಕೆಯರ ಕಾಮ ನದ ವಿಷಯಕ್ಕೆ ನಾಗರಿಕರಿಗಿಂತ ಬಿಗುವಾದ ಬಂಧನಗಳಿವೆ. ಉ ಣಾರ್ಥ ಆಡ್ಮಿರೆಲ್ಟಿ ದ್ವೀಪದಲ್ಲಿ ಹುಡುಗಿಯರಿಗೆ ಹದಿನೆಂಟು ವರ್ಷಗಳ ಹುಡುಗರಿಗೆ ೨೫ ವರ್ಷಗಳವರೆಗೆ ಮದುವೆಯಾಗುವ ಅಧಿಕಾರವಿಲ್ಲ ವರೆಗೆ ಹುಡುಗ ಹುಡುಗಿಯರಲ್ಲಿ ಪರಸ್ಪರ ಸಹವಾಸ, ಸಂಪರ್ಕಗಳು ಆಗುವಂತಿಲ್ಲ. ಇದರ ಪರಿಣಾಮವಾಗಿ ಹುಡುಗರು ಬೇರೆ ಸಮು ಗಳಲ್ಲಿಯ ಹುಡುಗಿಯರನ್ನು ಕದ್ದುಕೊಂಡು ತಂದು ಸಂಭೋಗಿಸು ಮತ್ತು ಹುಡುಗರಲ್ಲಿ ಮತ್ತು ಹುಡುಗಿಯರಲ್ಲಿ ಸಮರತಿ ಸ್ವರತಿಗಳ ರವು ತುಂಬ ಇದೆಯೆಂದು ಮಾರ್ಗರೆಟ್ ಮೀಡಳು ಅನ್ನುತ್ತಾಳೆ. ಸಾಮೋಆ ದ್ವೀಪದಲ್ಲಿ ಬಾಲಬಾಲಿಕೆಯರಿಗೆ ಬಾಲ್ಯದಿಂದಲೂ ಕೂಡಿ ಪ್ರೀತಿಸುವ ಅವಕಾಶವಿರುತ್ತದಲ್ಲದೆ ಮದುವೆಯೂ ಸಕಾಲದಲ್ಲಿ ಆಗು ಅಲ್ಲಿ ಬಾಲ್ಯದಲ್ಲಿ ಹುಡುಗ ಹುಡುಗಿಯರಲ್ಲಿ ಹಸ್ತಪ್ರಯೋಗದ ಪ್ರಸ ಬೇಕಾದಷ್ಟಿದ್ದರೂ ಮದುವೆಯಾದ ಕ್ಷಣದಿಂದ ಸ್ವರತಿಯು ಅದೃ ಗುತ್ತದೆ. ಬಹುತರ ಅನಾಗರಿಕ ಜನಾಂಗಗಳಲ್ಲೆಲ್ಲ ಅದೇ ಪರಿಸ್ಥಿತಿ

ಮನುಷ್ಯೇತರ ಪ್ರಾಣಿಗಳಲ್ಲಿಯೂ ಅದೆ ಸಂಗತಿಯು ನಿದ ಬರುತ್ತದೆ. ವಯಸ್ಸಿಗೆ ಬಂದ ಪ್ರಾಣಿಗಳಿಗೆ ಸಂಭೋಗಕ್ಕೆ ಅವಕಾಶ ದಿದ್ದರೆ ಅವು ಮನುಷ್ಯನಂತೆಯೆ ವಿವಿಧ ರೀತಿಯಿಂದ ಇಂದ್ರಿಯ ಘರ್ಷಿಸಿಕೊಂಡು ಕಾಮಶಾಂತಿಯನ್ನು ಪಡೆಯುವವೆಂದು ಪ್ರೊ ಲ್ಡ್‌ನು ಅನ್ನುತ್ತಾನೆ. ಅಮೇರಿಕೆಯಲ್ಲಿ ಮಾನಸರೋಗ ತಜ್ಞೆಯೆ ಮೂರು ಮಂಗಗಳ ಕಾಮಜೀವನವನ್ನು ಅಭ್ಯಸಿಸಿ ಆ ವಿಷಯವನ್ನು ರಾಷ್ಟ್ರೀಯ ಸಮಿತಿಯೆದುರಿನಲ್ಲಿ ಓದಿ ತೋರಿಸಿದಳು. ಆ ಮಂಗ

ಒಂದು ಹಿರಿಯಗಂಡು, ಒಂದು ಹೆಣ್ಣು, ಕಿರಿಯ ಗಂಡು ಮಂಗಗಳಿದ್ದವು. ಹಿರಿಯ ಗಂಡೇ ಯಾವಾಗಲೂ ಹೆಣ್ಣಿನ ಭೋಗವನ್ನು ಪಡೆಯುತ್ತಿತ್ತು. ಅದರಿಂದ ಕಿರಿಯ ಗಂಡಿಗೆ ಕಾಮೋಪವಾಸವಾದ್ದರಿಂದ ಅದು ಮುಷ್ಟಿಮೈಥುನ ವನ್ನು ಮಾಡಿಕೊಳ್ಳುತ್ತಿತ್ತು. ಹಿರಿಯ ಗಂಡು ಮಲಗಿದಾಗ ಇಲ್ಲವೆ ಬೇರೆ ಕಡೆಗೆ ಲಕ್ಷ್ಯಕೊಟ್ಟಾಗ ಕಿರಿಯದು ಹೆಣ್ಣನ್ನು ಆಕರ್ಷಿಸಿ ಭೋಗಿಸಲು ಯತ್ನಿಸುತ್ತಿತ್ತು. ಹಿರಿಯ ಗಂಡಿಗೆ ಆ ಸುದ್ದಿ ತಿಳಿದ ಕೂಡಲೆ ಅದು ರೇಗಿ ಕಿರಿಯದರ ಮೇಲೆ ಹರಿ ಹಾಯುತ್ತಿತ್ತು ಆಗ ಕಿರಿಯದು ಒಂದು ಮೂಲೆ ಯಲ್ಲಿ ಕೂತು ಮುಷ್ಟಿಮೈಥುನ ಮಾಡಿಕೊಳ್ಳುತ್ತಿತ್ತು. ಪ್ರೊ ಎಂ. ಗ್ಯಾಡಿ ಯಿಟನು ಪಶುವೈದ್ಯರ ಸಮಿತಿಯಲ್ಲಿ ಓದಿದ ರಿಪೋರ್ಟಿನಲ್ಲಿ ಕೆಲವು ಉದಾ ಹರಣೆಗಳನ್ನು ಕೊಟ್ಟು ಮಂಗ, ಕುದುರೆ, ಆಡು, ನಾಯಿ, ಒಂಟೆ, ಆನೆಗಳು ರತಿಋತುವಿನಲ್ಲಿ (ಬೆದಿಗೆ) ಸಂಭೋಗಕ್ಕೆ ಅನುವಿಲ್ಲದಾಗ ಗಂಡೂ ಹೆಣ್ಣೂ ವಿವಿಧ ರೀತಿಯಿಂದ ಇಂದ್ರಿಯ ಘರ್ಷಣವನ್ನು ಮಾಡಿಕೊಳ್ಳುವವೆಂದು ಅಂದಿ ದ್ದಾನೆ ಅತಿಕಾಮವಿಕಾರವಾದಾಗ ರತಿಗೆ ಅನುಕೂಲವಿಲ್ಲದಾಗ ಟಗರಿ, ಕುರಿ, ಒಂಟ, ಆನೆ, ಕರಡಿ, ಮಂಗಗಳು ಸ್ವರತಿಯನ್ನು ಆಚರಿಸುವವೆಂದು ಹ್ಯಾವ್‌ಲೋಕ್ ಎಲಿಸನೆನ್ನುತ್ತಾನೆ. ಹೆಣ್ಣುನಾಯಿಯು ಇಂದ್ರಿಯವನ್ನು ಬಿರುಸಾದ ವಸ್ತುವಿಗೆ ತಿಕ್ಕುವುದರಿಂದ ಇಲ್ಲವೆ ನಾಲಿಗೆಯಿಂದ ನೆಕ್ಕುವದರಿಂದ ಸ್ವರತಿಯನ್ನು ಮಾಡಿಕೊಳ್ಳುವುದು. ಬೆಕ್ಕುಗಳೂ ಹಾಗೆಯೆ ಮಾಡುತ್ತವೆ ಕುದುರೆಗಳು ಇಂದ್ರಿಯವನ್ನು ಹೊಟ್ಟೆಗೆ ತಿಕ್ಕಿಕೊಂಡು ಸ್ಖಲಿಸುವವು. ಮಂಗ ಗಳು ಮನುಷ್ಯರಂತೆಯೆ ಇಂದ್ರಿಯ ಸಂಚಾಲನ ಘರ್ಷಣಗಳನ್ನು ಮಾಡಿ ಕೊಳ್ಳುವವೆಂದು ಪ್ರೊ. ಟಿಲ್ಲಿಯುರನುಅನ್ನುತ್ತಾನೆ. ಆದರೆ ಸಕಾಲದಲ್ಲಿ ಸಂಭೋ ಗಕ್ಕೆ ಎಡೆಯುಳ್ಳ ಪ್ರಾಣಿಗಳಲ್ಲಿ ಅಥವಾ ಮನುಷ್ಯ ಜನಾಂಗಗಳಲ್ಲಿ ತಾರುಣ್ಯ ಪ್ರಾಪ್ತವಾದ ಮೇಲೆ ಸ್ವರತಿಯು ಸರ್ವಥಾ ಕಂಡು ಬರುವದಿಲ್ಲವೆಂದು ವಿಜ್ಞಾನಿ ಗಳು ಒಮ್ಮತದಿಂದ ಸಾರಿದ್ದಾರೆ.

ಮಿಕ್ಕ ಪ್ರಾಣಿಗಳಂತೆ ಅಥವಾ ಕಾಡುಜನಾಂಗಗಳಂತೆ ಬೇಗನೆ ಚಿಕ್ಕ ವಯಸ್ಸಿನಲ್ಲಿಯೆ ಮದುವೆಯಾಗಿ ಸಂಭೋಗವನ್ನು ಪ್ರಾರಂಭಿಸುವುದು, ಬಹು ಪ್ರಯಾಸದಿಂದ ಕಟ್ಟಿಕೊಂಡು ಬಂದ ಮಾನವ ಸಂಸ್ಕೃತಿಗೆ ತುಸು ಅನನುಕೂಲ ವೆನಿಸುವುದು ಏಕೆಂದರೆ ಮನುಷ್ಯನು ಸಂಸ್ಕೃತ ಸಮಾಜದಲ್ಲಿ ತಲೆಯೆತ್ತಿ

ಓಡಾಡಬೇಕಾದರೆ ವಿಶಿಷ್ಟ ವಯಸ್ಸಿನವರೆಗೆ ಜ್ಞಾನ, ಆರೋಗ್ಯ, ಧನಗಳ ಸಂಪಾದನೆಗೆ ಮನವನ್ನು ತೊಡಗಿಸಬೇಕಾಗುತ್ತದೆ. ಅವಕ್ಕೆ ತಕ್ಕಷ್ಟು ಅಂದರೆ ಹೆಣ್ಣಿಗೆ ೧೮ ವರ್ಷದವರೆಗೆ ಗಂಡಿಗೆ ೨೫ ವರ್ಷದವರೆಗೆ ಸಂಯಮ ದಿಂದಿದ್ದರೆ ತನುಮನಗಳ ಬೆಳಗೆಗೂ ಓಜೋಗ್ರಂಥಿಗಳ ಆರೋಗ್ಯಕ್ಕೂ ಸಹಾಯವಾಗುವುದೆಂದು ಹಿಂದೆ ಹೇಳಿದ್ದೇವೆ ಆದರೆ ಜೀವನಸಂಗ್ರಾಮವು ಈಗ ದಿನದಿನಕ್ಕೂ ಭೀಕರವಾಗುತ್ತ ನಡೆದಿರುವುದರಿಂದ ಅಷ್ಟು ವಯಸ್ಸಾದರೂ ವಿವಿಧ ಕಾರಣಗಳ ಮೂಲಕ ಮದುವೆಗೆ ಅನುಕೂಲವಾಗುವುದಿಲ್ಲ. ಅದರ ಪರಿಣಾಮವಾಗಿ ಹಸ್ತಪ್ರಯೋಗದ ಪ್ರಮಾಣವೂ ಹೆಚ್ಚುತ್ತಿದೆ. ಈ ಸಮಸ್ಯೆ ಯನ್ನು ಸಮಾಜಸುಧಾರಕರು ಬಿಡಿಸಬೇಕಾಗಿದೆ. ಮದುವೆಗೆ ತಕ್ಕವರಾದ ತರುಣ ತರುಣಿಯರಿಗೆ ವಿವಾಹಕ್ಕೆ ಇರುವ ತಡೆತೊಂದರೆಗಳಾವವು, ಅವನ್ನು ನಿವಾರಿಸುವುದು ಹೇಗೆಂಬುದನ್ನು ಕಂಡುಹಿಡಿದು ಬೇಗನೆ ತಕ್ಕ ಉಪಾಯವನ್ನು ಮಾಡಬೇಕು.

ಈಗ ಸ್ವರತರು ತಾವಾಗಿಯೆ ಮಾಡಿಕೊಳ್ಳುವ ಉಪಾಯಗಳನ್ನು ನೋಡುವಾ. ಈ ಉಪಾಯಗಳಲ್ಲಿ ದೈಹಿಕ ಉದ್ದೀಪನದ ನಿವಾರಣ ಮತ್ತು ಮಾನಸಿಕ ಉದ್ದೀಪನದ ನಿವಾರಣ ಎಂದು ಎರಡು ಭಾಗಗಳನ್ನು ಕಲ್ಪಿಸ ಬಹುದು. ದೇಹದಲ್ಲಿ ಕಾಮೇಂದ್ರಿಯಗಳ ಉತ್ತೇಜನಕ್ಕೆ ಅನೇಕ ಕಾರಣ ಗಳಿವೆ ಅವುಗಳಲ್ಲಿ ಕೆಲವನ್ನು ಈ ಮೊದಲು ಹೇಳಿದ್ದೇವೆ ಉದಾಹರಣಾರ್ಥ ಮಲಬದ್ಧತೆ, ಕರುಳಿನ ಕ್ರಿಮಿಗಳು, ಬಿಗಿಯಾದ ಬಟ್ಟೆಗಳು, ಇಂದ್ರಿಯದ ಸುತ್ತಲು ಕಜ್ಜಿ ತುರಿಕೆ ಮುಂತಾಗಿ ಇವುಗಳಿಂದ ಸಣ್ಣ ಮಕ್ಕಳ ಕಾಮೇಂದ್ರಿಯ ಗಳು ಉತ್ತೇಜಿತವಾಗುವಂತೆ ದೊಡ್ಡವರವೂ ಉತ್ತೇಜಿತವಾಗುತ್ತವೆ. ಅವನ್ನು ಕೂಡಲೆ ನಿವಾರಿಸಬೇಕು. ದೊಡ್ಡವರಲ್ಲಿ ಹೆಚ್ಚಾಗಿ ಕಂಡುಬರುವ ಇನ್ನೊಂದು ಕಾರಣವೆಂದರೆ ಲಿಂಗದ ಮಣಿಯ ಸುತ್ತಲೂ ಸೂಕ್ಷ್ಮವಾದ ಒಂದು ರಸವು ನೈಸರ್ಗಿಕವಾಗಿ ಜಿನುಗುತ್ತಿರುತ್ತದೆ. ಅದು ಅಲ್ಲಿಯೆ ಕೂಡಿಬೀಳುವುದರಿಂದ ಒಂದು ವಿಧದ ಕೆರೆತ ಉಂಟಾಗಿ ಹಸ್ತಪ್ರಯೋಗದ ಪ್ರವೃತ್ತಿಯುಂಟಾಗುವದು ಆದ್ದರಿಂದ ದಿನಾಲು ಒಂದು ಸಲ ತಣ್ಣೀರಿನಿಂದ ಆ ಮಣಿರಸವನ್ನು ತೊಳೆದು ಕೊಳ್ಳಬೇಕು. ಲಿಂಗದ ಮುಂದೊಗಲು ಬಹಳ ಸಂಕುಚಿತವಾಗಿದ್ದರೆ ಆ ಮಣಿ ರಸವು ಕಲೆಬೀಳುವುದಕ್ಕೂ ಮೇಲಿಂದ ಮೇಲೆ ಉದ್ರೇಕವಾಗಲಿಕ್ಕೂ ಕಾರಣ



(೧೩೦ ನೆಯ ಪುಟದಲ್ಲಿ)

ಹುಡುಗ ಹುಡುಗಿಯರು ಕೂಡಿಯೆ ಆಟವಾಡಿದರೆ ಮನಸ್ಸಿನ ಅತಿ ಉದ್ರೇಕ ಶೀಲತೆಯು ಕಡಿಮೆಯಾಗುವದು



(೧೩೧ ನೆಯ ಪುಟವಲ್ಲಿ)

ಗ್ರೀಕ ಸಾಮ್ರಾಜ್ಯದಲ್ಲಿ ಸ್ಪಾರ್ಟಾದಲ್ಲಿ ಜಾತ್ರೆಗಳಲ್ಲಿ ಸ್ತ್ರೀ-ಪುರುಷರು
ಬತ್ತಲೆಯಾಗಿ ಕಲೆಯಬೇಕೆಂಬ ಕಾಯದೆಗಳಿದ್ದವು

ವಾಗುವದು. ಸಂಕುಚಿತ ಮುಂದೊಗಲಿನಿಂದ ಮುಂದೆ ದಾಂಪತ್ಯಸುಖಕೂ ತಡೆಯಾಗುವ ಸಂಭವವಿದೆ ಆದ್ದರಿಂದ ಮುಂದೊಗಲು ಬಹಳ ಸಂಕುಚಿತ ವಾಗಿದ್ದರೆ (ಕೈಯಿಂದ ಹಿಂದೆ ನೂಕಿದರೂ ಮಣಿಯ ಹಿಂದೆ ಸರಿಯದಿದ್ದರೆ ಅಥವಾ ಸರಿದರೂ ಬಹಳ ನೋವಾಗುತ್ತಿದ್ದರೆ) ಸಕಾಲದಲ್ಲಿ ಶಸ್ತ್ರವೈದ್ಯರಿಂದ ಅದನ್ನು ತೆಗೆಸಬೇಕು.

ಹುಡುಗರಾಗಲಿ ಹುಡುಗಿಯರಾಗಲಿ ಶೈಶವದಿಂದಲೆ ಪ್ರತ್ಯೇಕವಾದ ಹಾಸಿಗೆಯಲ್ಲಿಯೆ ಮಲಗಿಸಲ್ಪಡಬೇಕು ಬೆಳೆದ ನಂತರವೂ ಮಿತ್ರರಾಗಲಿ, ಗೆಳತಿಯರಾಗಲಿ ಒಂದೇ ಹಾಸಿಗೆಯಲ್ಲಿ ಹತ್ತಿರ ಹತ್ತಿರ ಮಲಗಬಾರದು ಕೆಲವು ವಿದ್ಯಾರ್ಥಿ ಗೃಹಗಳಲ್ಲಿ ಅಥವಾ ವಿದ್ಯಾರ್ಥಿನೀ ನಿಲಯಗಳಲ್ಲಿ ಈ ವಿಷಯಕ್ಕೆ ಸಾಕಷ್ಟು ಲಕ್ಷ ಕೊಡದಿರುವುದರಿಂದಲೆ ಅವರಲ್ಲಿ ಸಾಮುದಾಯಿಕ ಸ್ವರತಿಯು ಮಿತಿಮೀರಿ ಬೆಳೆದಿರುತ್ತದೆಂದು ಸಂಶೋಧಕರು ಹೇಳುತ್ತಾರೆ ಮಧ್ಯಾಹ್ನ ಅಥವಾ ಬೆಳಿಗ್ಗೆ ನಿದ್ರೆ ತೀರಿದ ಕೂಡಲೆ ಹಾಸಿಗೆಯಿಂದ ಎದ್ದು ಬಿಡಬೇಕು. ರಾತ್ರಿ ಮಲಗಿದ ಕೂಡಲೆ ಕಣ್ಣುಮುಚ್ಚಿ ನಿದ್ದೆಹೋಗಲು ಯತ್ನಿಸಬೇಕು. ಮೆತ್ತಗಿನ ಹಾಸಿಗೆಯಲ್ಲಿ ಸುಮ್ಮನೆ ಹೊರಳಾಡು ತ್ತಿರುವುದರಿಂದ ಮನಸ್ಸಿನಲ್ಲಿ ಅನೇಕ ಕಾಮುಕ ವಿಚಾರಗಳು ಬರಲಿಕ್ಕೆ ಸಹಾಯವಾಗುವುದು ಹಾಸಿಗೆ ಬಹಳ ಮೆತ್ತಗಾಗಿರಬಾರದು. ಅಂಗಾತವಾಗಿ ಮಲಗದೆ ಮಗ್ಗುಲಾಗಿ ಕಾಲುಗಳನ್ನು ಕೊಂಚ ಎಳೆದುಕೊಂಡು ಮಲಗಬೇಕು ದೇಹದಲ್ಲಿ ಕಾವು ಹೆಚ್ಚಾಗುವಂತೆ ಅತಿಯಾಗಿ ಬಟ್ಟೆಗಳನ್ನು ತೊಟ್ಟುಕೊಳ್ಳ ಬಾರದು. ಮಲಗಿದ ಕೂಡಲೆ ನಿದ್ದೆ ಬರಬೇಕಾದರೆ ಆಟ ವ್ಯಾಯಾಮಗಳಿಂದ ದೇಹವನ್ನು ಸಾಕಷ್ಟು ದಣಿಸಬೇಕು ಮತ್ತು ಅಜೀರ್ಣವಾಯುಗಳಿಂದ ಹೊಟ್ಟೆಯು ಕೆಡದಂತೆ ಹಿತವಾದ ಮಿತವಾದ ಆಹಾರವನ್ನು ಸೇವಿಸಬೇಕು. ಉತ್ತೇಜಕವಾದ ಮಸಾಲೆ ಕೂಡಿದ ಆಹಾರ, ಚಹ, ಕಾಫಿ, ಬೀಡಿ, ಮಾದಕ ಪೇಯಗಳನ್ನು ಸಾಧ್ಯವಾದಷ್ಟು ವರ್ಜಿಸಬೇಕು. ಅಲ್ಲದೆ ಕಾಮಾಂಗಗಳನ್ನು ಒಳಗಿನಿಂದ ಕೆರಳಿಸುವ ಪರಮಾ, ಗರಮಿ, ಮೂತ್ರದ ಕಲ್ಲುಗಳು (ಅಶ್ಮರಿ) ಮುಂತಾದವು ಇದ್ದರೆ ತಜ್ಞರಿಂದ ಪರೀಕ್ಷಿಸಿ ಚಿಕಿತ್ಸೆ ಮಾಡಿಸಬೇಕು.

ಮನಸ್ಸಿನಲ್ಲಿ ಯಾವಾಗಲೂ ಕಾಮುಕ ವಿಚಾರಗಳನ್ನು ತುಂಬಲು ಸಾಧಕವಾದ ಸಿನಿಮಾ, ನಾಟಕಗಳನ್ನು ಹೆಚ್ಚಾಗಿ ನೋಡದಿರುವುದು ಒಳಿತು

ಕಾಮೋದ್ದೀಪನವನ್ನುಂಟುಮಾಡಿ ಅಸಂಯುತ ವಿಲಾಸಕ್ಕೆ ಎಡೆಕೊಡುವ ಕಥೆ ಕಾದಂಬರಿಗಳನ್ನು ವಿಶೇಷವಾಗಿ ಓದಬಾರದು; ಅಂಥ ಹರಟೆಗಳಲ್ಲಿ ತೊಡಗ ಬಾರದು. ಸ್ವರತರು ಸಾಧ್ಯವಾದಷ್ಟು ಜನಸಮುದಾಯದಲ್ಲಿರಲು ಯತ್ನಿಸ ಬೇಕು. ಯಾವಾಗಲೂ ಮಾನಸಿಕ ಸ್ವರತಿಯ ಚಟವುಳ್ಳ ಚಿತ್ತಕ್ಕೆ ಗಾಯನ, ಚಿತ್ರಕಲೆ, ಸಾಹಿತ್ಯಸೇವೆ, ಸಮಾಜಸೇವೆ, ದೇಶಸೇವೆಗಳ ಅಭ್ಯಾಸವನ್ನು ಹಚ್ಚಬೇಕು. ಮನಸ್ಸಿಗೆ ಏನಾದರೊಂದು ಕೆಲಸ ಬೇಕೇ ಆಗಿರುವುದರಿಂದ ಅದರಲ್ಲಿಯ ಕೆಟ್ಟ ವಿಚಾರಗಳನ್ನು ಓಡಿಸಬೇಕಾದರೆ ಅದನ್ನು ಸದ್ವಿಚಾರ ಗಳಿಂದ ತುಂಬಬೇಕು. ವಿವಿಧ ಆಟ, ನೋಟ, ಸ್ಪರ್ಧೆ, ಸಮ್ಮೇಲನಗಳಲ್ಲಿ ಮೈಮರೆವಂತೆ ಪಾಲುಗೊಳ್ಳಬೇಕು.

ಪಾರಂಪರಿಕರು ಹೇಳುವಂತೆ ತರುಣ ತರುಣಿಯರು ಪರಸ್ಪರರಿಂದ ದೂರ ಓಡಿಹೋದರೆ ಕಾಮವಿಕಾರವು ಕಡಿಮೆಯಾಗದು. ಏಕೆಂದರೆ ದಿಟ್ಟಿಸಿ ನೋಡದವರು ಓರೆಗಣ್ಣಿನಿಂದಾದರೂ ನೋಡದಿರರು. ಮತ್ತು ಒತ್ತಾಯದಿಂದ ಕಣ್ಣುಮುಚ್ಚಿದರೆ ಪ್ರಿಯ-ಪ್ರೇಯಸಿಯರ ಮೂರ್ತಿಗಳೆ ಮನದೆದುರು ನಲಿಯು ವವು ಆದ್ದರಿಂದ ಯುವಕ-ಯುವತಿಯರು ಒಂದೆಡೆಗೆ ನೇರಿ ಆಟ, ಚರ್ಚೆ, ಸ್ಪರ್ಧೆಗಳಲ್ಲಿ ಪಾಲುಗೊಳ್ಳಬೇಕು. ಅದರಿಂದ ಭೋಗ್ಯವು ಸಮೀಪದಲ್ಲಿದ್ದರೂ ಭೋಗವನ್ನು ಸಂಯಮಿಸುವ ಅಭ್ಯಾಸವು ಮನಕ್ಕಾಗುವದು. ಅಲ್ಲದೆ ತರುಣ ತರುಣಿಯರು ಬೌದ್ಧಿಕವಾದ ಚರ್ಚೆ, ಸ್ಪರ್ಧೆಗಳಲ್ಲಿ ಮಗ್ನರಾದರೆ ಅವರ ಮನಕ್ಕೆ ಕಾಮವಿಲಾಸದ ಅವಕಾಶವೆ ಸಿಗುವುದಿಲ್ಲ. ಅಂಥ ಚರ್ಚೆ, ಸ್ಪರ್ಧೆ ಗಳಿಲ್ಲದಾಗ ಮಾತ್ರ ಅವಿವಾಹಿತ ತರುಣ ತರುಣಿಯರು ಏಕಾಂತದಲ್ಲಿ ಒಂದೆಡೆಗೆ ಸೇರಬಾರದು. ಏಕೆಂದರೆ ಬೇರೆ ವಿಷಯವಿಲ್ಲದಿರುವಾಗ ತನುಮನ ಗಳಿಗೆ ಪ್ರೇಮವೆ ವಿಷಯವಾಗಿ ಚುಂಬನಾಲಿಂಗನಗಳು ನಡೆದುಹೋಗುವವು. ಆದರೆ ಗರ್ಭಧಾರಣೆಯ ಅಂಜಿಕೆಯಿಂದ ಸಂಭೋಗವೊಂದು ನಡೆಯಲಾರದು. ಪರಿಣಾಮದಲ್ಲಿ ಉದ್ರಿಕ್ತವಾದ ನರಮಂಡಲಕ್ಕೆ ಹಸ್ತಪ್ರಯೋಗದಿಂದಲೆ ಶಾಂತಿ ಯನ್ನು ಪಡೆಯಲು ಅವರು ಹವಣಿಸುವರು. ಮನೆಯ ಒಳಗಿನ ಅಥವಾ ಬಯಲಲ್ಲಿಯ ಆಟಗಳನ್ನು ತರುಣ-ತರುಣಿಯರು ಕಲಿತು ಆಡಿದರೆ ಸ್ತ್ರೀ ಪುರುಷರಲ್ಲಿ,ದೂರ ಸರಿದಂತೆ ತೀವ್ರವಾಗುತ್ತ ನಡೆಯುವ ಸಹಜ ಆಕರ್ಷಣವು ಒಂದು ತೂಕದಲ್ಲಿ ನಿಲ್ಲುವುದು ಗ್ರೀಕ್ ಸಾಮ್ರಾಜ್ಯಕಾಲದಲ್ಲಿ ಸ್ಪಾರ್ಟನ್

ಜಾತ್ರೆಗಳಲ್ಲಿ ಸ್ತ್ರೀ-ಪುರುಷರೆಲ್ಲ ಬತ್ತಲೆಯಾಗಿ ಜಾತ್ರೆಗೆ ಹೋಗಬೇಕೆಂದು ಕಾಯಿದೆಗಳಿದ್ದವಂತೆ. ಅದರಿಂದ ಪ್ರತಿಲಿಂಗಿಯ ಸುಂದರವಾದ ಅಂಗಾಂಗ ಗಳನ್ನು ನೋಡಿದ ಕೂಡಲೆ ಕೆಲವರಿಗೆ ಉಂಟಾಗುವ ಸ್ವರತಿಯ ಪ್ರವೃತ್ತಿಯು ನಾಶವಾಗುವದು.

ಇನ್ನು ಕೊನೆಯದಾಗಿ, ಎಷ್ಟು ಯತ್ನಿಸಿದರೂ ಹಸ್ತಪ್ರಯೋಗವನ್ನು ನಿಲ್ಲಿಸಲಾರದವರಿಗೆ ಒಂದೆರಡು ಸಲಹೆಗಳನ್ನು ಕೊಡಬಯಸುತ್ತೇವೆ. ಮೇಲೆ ಹೇಳಿದ ಉಪಾಯಗಳಿಂದ ಬಹುತರ ಸ್ವರತರಿಗೆ ತಮ್ಮ ದುರಭ್ಯಾಸವನ್ನು ಜಯಿಸಲು ಸಾಧ್ಯವಾಗಿಯೆ ತೀರುವದು. ಪ್ರತಿದಿನವೂ ಅಥವಾ ದಿನಕ್ಕೆ ಹಲವು ಸಲ ಸ್ವರತಿಯನ್ನಾಚರಿಸುವವರಿಗೆ ಒಮ್ಮೆಲೆ ಅದನ್ನು ಬಿಡಲಾಗಲಿಕ್ಕಿಲ್ಲ. ಮನಸ್ಸನ್ನು ತೀರ ಗಟ್ಟಿಗೊಳಿಸಿ ಒಂದೆರಡು ದಿನ ಅಥವಾ ವಾರಗಳ ವರೆಗೆ ಅದನ್ನು ನಿಲ್ಲಿಸಿದರೂ ಯಾವುದಾದರೊಂದು ಕಾರಣದಿಂದ ಆ ಸಂಯಮವು ಹರಿದರೆ ನೋಂಲಿನ ಇಮ್ಮಡಿ ಕಸುವಿನಿಂದ ಆ ಚಟಕ್ಕೆ ಬಲಿಬೀಳುವ ಸಂಭವ ವಿದೆ. ಆದ್ದರಿಂದ ಒಮ್ಮೆಲೆ ನಿಲ್ಲಿಸುವುದಕ್ಕಿಂತ ಕ್ರಮೇಣ ಆ ಚಟವನ್ನು ಗೆಲ್ಲುವುದು ಒಳ್ಳೆ ಉಪಾಯವೆಂದು ನಮ್ಮ ಅಭಿಪ್ರಾಯವಾಗಿದೆ ಎರಡು ಹಸ್ತಪ್ರಯೋಗಗಳ ನಡುವಿನ ಅಂತರವನ್ನು ಹೆಚ್ಚಿಸುತ್ತ ಹೋಗಬೇಕು ಉದಾಹರಣಾರ್ಥ ಪ್ರತಿದಿನವೂ ಮುಷ್ಟಿಮೈಥುನ ಮಾಡಿಕೊಳ್ಳುವವರು ಒಂದೆರಡು ವಾರಗಳ ವರೆಗೆ ಎರಡು ದಿನಕ್ಕೊಮ್ಮೆ, ನಂತರ ಮೂರು ದಿನಕ್ಕೆ ಒಮ್ಮೆ, ಮುಂದೆ ನಾಲ್ಕು ದಿನಕ್ಕೊಮ್ಮೆ ಮಾಡಿಕೊಳ್ಳಬಹುದು ಹೀಗೆ ಬರ ಬರುತ್ತ ನಡುವಿನ ಅಂತರವು ಬೆಳೆಯುತ್ತ ವಾರಕ್ಕೊಮ್ಮೆ, ೧೫ ದಿನಕ್ಕೊಮ್ಮೆ, ತಿಂಗಳಿಗೊಮ್ಮೆಯ ವರೆಗೆ ಮುಟ್ಟಿತೆಂದರೆ ಆ ಚಟವು ಅಪಾಯದ ಸೀಮೆಯನ್ನು ದಾಟಿದಂತೆಯೆ ಸರಿ. ಆಗ ಸ್ವರತರಿಗೆ ಇಚ್ಛಾನುಸಾರವಾಗಿ ಸಂಯಮದ ಅವಧಿಯನ್ನು ಬೆಳೆಸಬಲ್ಲೆವೆಂಬ ಆತ್ಮವಿಶ್ವಾಸವೂ ನೆಲೆಗೊಳ್ಳುವುದು ಅದರಿಂದ ಸ್ವರತಿಗಾಗಿ ನಿಯಮಿಸಿದ ದಿನವೂ ಅವರು ಅದನ್ನು ಮಾಡಿಕೊಳ್ಳದೆ ಮನೋದಾರ್ಢ್ಯವನ್ನು ಹೆಚ್ಚಿಸಿಕೊಳ್ಳಲು ಸಮರ್ಥರಾಗುವರು. ಕ್ರಮೇಣ ಅವರಿಗೆ ಸ್ವರತಿಯೆಂದರೆ "ಬೇಕಾದಾಗ ಮಾಡಿಕೊಳ್ಳಬಲ್ಲೆ; ಬೇಡವಾದಾಗ ಬಿಡಬಲ್ಲೆ" ಎನ್ನುವಷ್ಟು ಕ್ಷುಲ್ಲಕವಾದ ಒಂದು ಆಟವೆನಿಸುವುದು. ಹೀಗೆ ಆ ದುರಭ್ಯಾಸದ ದುಷ್ಪರಿಣಾಮದ ಪೈಶಾಚಿಕ ರೆಕ್ಕೆಗಳು ವೈಜ್ಞಾನಿಕ ದೃಷ್ಟಿ

ಯಿಂದ ಉರಿದುಹೋಗಿ ಆತ್ಮವಿಶ್ವಾಸವು ಅಂಕುರಿಸಿತೆಂದರೆ ಸ್ವರತರು ಪೂರ್ಣವಾಗಿ ಅದರ ಹೆಡಮುರಿಗೆ ಕಟ್ಟಿ ಒಗೆಯದಿರರು. ಮೇಲ್ಕಂಡ ಸಲಹೆಯನ್ನು ಕಾರ್ಯರಂಗಕ್ಕಿಳಿಸಿ ಜಯಶೀಲರಾದ ನೂರಾರು ಸ್ವರತರ ಪತ್ರಗಳು ನಮಗೆ ಬಂದಿವೆ.

**ಓಜೋಽಸಿ ಓಜಃ । ವೀರ್ಯಮಸಿ ವೀರ್ಯಮ್ ॥**

**— ಮುಗಿದುದು —**



ಪ್ರಕಾಶಕರು :
**ಡಾ. ಗೋಪಾಲಕೃಷ್ಣರಾಯರು**
**ತಾರಾನಾಥ ಆಯುರ್ವೇದ ಮಂದಿರ**
**ಧಾರವಾಡ.**

ಮುದ್ರಕರು :
**ಎನ್. ಎಸ್. ಜೆಂಗೇರಿ**
ವಿಜಯ ಮುದ್ರಾಲಯ
ಧಾರವಾಡ.